ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
★
JULY 8
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೮—೭—೧೯೪೬ [ ಸಂಚಿಕೆ ೧೯

# ಹಿಂದೀ ಸಂರಕ್ಷಣ ಬಲಗಳ ಭೂತ-ಭವಿತವ್ಯ*

## ವಿಷಮಯ ಪ್ರಚಾರದಿಂದ ಹಿಂದೀ ಪಡೆಗಳ ದೇಶಾಭಿಮಾನವನ್ನು ಅಳಿಸಿದ ಕತೆ : ಹಿಂದೀಯರ ವಿರುದ್ಧ ಪಕ್ಷಪಾತ

…………………… ಅರ್ಝಾದ ಹಿಂದ ಸೇನೆಯ ಕರ್ನಲ ಸಹಗಲರಿಂದ ……………………

ಇಂದು, ಹಿಂದುಸ್ತಾನದಲ್ಲಿ ಮಹತ್ತರವಾದ ಘಟನಾತ್ಮಕ ಬದಲಾವಣೆಗಳು ಸನ್ನಿಹಿತವಾಗಿರುವಾಗ, ಹಿಂದುಸ್ತಾನದ ಸಂರಕ್ಷಣ ಬಲಗಳ ಭವಿತವ್ಯವನ್ನು ಕುರಿತು ಗಹನವೂ ವಿಮರ್ಶಾತ್ಮಕವೂ ಆದ ಚಿಂತನೆ ಅವಶ್ಯಕವಾಗಿದೆ.

ಹಿಂದುಸ್ತಾನದ ಸಂರಕ್ಷಣ ಬಲಗಳಲ್ಲಿ, (ಬ್ರಿಟಿಶ ಭೂ-ಜಲ-ವಾಯು ಬಲಗಳಲ್ಲದೆ) ಹಿಂದೀ ಸೈನ್ಯ, ಹಿಂದೀ ನೌಕಾಪಡೆ ಮತ್ತು ಹಿಂದೀ ವಿಮಾನ ಬಲವೆಂಬ ಮೂರು ಭಾಗಗಳಿವೆ. ಅವುಗಳಲ್ಲಿ ಹಿಂದೀ ಸೈನ್ಯವೇ ಎಲ್ಲಕ್ಕೂ ಹಳೆಯದು. ಅದರ ಹುಟ್ಟು ಈಸ್ಟ ಇಂಡಿಯಾ ಕಂಪನಿಯ ಆರಂಭ ದಿನಗಳಲ್ಲಿಯೆ ಆಗಿತ್ತು.

ಹಿಂದೀ ಸಂರಕ್ಷಣ ಬಲಗಳ ಭವಿತವ್ಯದ ನಿರ್ಣಯ ಮಾಡುವಾಗ ಈ ಮೂರೂ ಬಲಗಳಿಗೆ ಸರಿಯಾದ ಗಮನವೀಯುವದು ಅವಶ್ಯವಾಗಿದ್ದರೂ ಅತಿ ಹಳೆಯದೂ ಬ್ರಿಟಿಶ ಸಾಮ್ರಾಜ್ಯವಾದಿ ಆಳಿಕೆಯ ಅತ್ಯಂತ ಪ್ರತ್ಯಕ್ಷ ನಿರ್ಮಾಣವೂ ಆದ ಹಿಂದೀ ಸೈನ್ಯಕ್ಕೆ ಪ್ರಥಮ ಸ್ಥಾನವೀಯಬೇಕಾಗುವದು. ಅದರ ಇತಿಹಾಸವನ್ನು ಅಭ್ಯಸಿಸಿ ಆರಂಭದಿಂದ ಇಂದಿನ ವರೆಗೆ ಅದು ಹೊಂದಿದ ಅವಸ್ಥಾಂತರಗಳ ಮೇಲೆ ಪ್ರಭಾವ ಬೀರಿದ ವಿದ್ಯಮಾನಗಳನ್ನು ಪೃಥಕ್ಕರಿಸುವದು ಅವಶ್ಯ. ಇದರಿಂದ ಹಿಂದೀ ಸೈನ್ಯದ ಭವಿತವ್ಯದ ನಿರ್ಣಯಕ್ಕಷ್ಟೇ ಅಲ್ಲ, ಹೆಚ್ಚು ಕಡಿಮೆ ಅವೇ ವಿದ್ಯಮಾನಗಳಿಂದ ಪ್ರಭಾವಗೊಂಡ ಇತರ ಎರಡು ಬಲಗಳ ಭವಿತವ್ಯ ನಿರ್ಣಯಕ್ಕೂ ಸಹಾಯವಾದೀತು.

ಹಿಂದೀ ರಾಜಕಾರಣಿಗಳು ಸಂರಕ್ಷಣ ಬಲಗಳಲ್ಲಿ ಆಸ್ಥೆ ತೋರಲಾರಂಭಿಸಿದಂದಿನಿಂದ ಅವರು ಪರಸ್ಪರ ಬಹಳ ಭಿನ್ನವಾದ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿದ್ದಾರೆ. ಕೆಲವರು ಅವುಗಳು ಕೇವಲ ಹೊಟ್ಟೆಪಾಡಿನ ಬಲಗಳೆಂದಿದ್ದರೆ ಇತರರು ಅವುಗಳ ಯುದ್ಧಸಾಮರ್ಥ್ಯವನ್ನು ಹೊಗಳಿದರೂ ಬ್ರಿಟಿಶ ಸಾಮ್ರಾಜ್ಯವಾದಿಗಳ ಕೈಗೊಂಬೆಗಳೆಂದು ಹಳಿದಿದ್ದಾರೆ. ಬ್ರಿಟಿಶ ಅಭಿಪ್ರಾಯವೂ ಅವುಗಳ ವಿಷಯಕ್ಕೆ ಒಬ್ಬಗೆಯಾಗಿಲ್ಲ. ಕೆಲವರು ಅವು ಯುರೋಪಿಯನ್ ಸೈನ್ಯಗಳಿಗೆ ಎಂದೂ ಸಮಾನವಾಗಲಾರವೆಂದು ಸಾರಿದ್ದರೆ ಉಳಿದವರು ಅಷ್ಟೇ ಜೋರಿನಿಂದ ಅವುಗಳ ಶೌರ್ಯ, ಕರ್ತವ್ಯಪರಾಯಣತೆ, ವಿಧೇಯತೆಗಳನ್ನು ಹೊಗಳಿದ್ದಾರೆ. ಈ ಭಿನ್ನಾಭಿಪ್ರಾಯಗಳಿಗೆ ಯಾರೂ ಈ ವಿಷಯವನ್ನು ಕೂಲಂಕಷವಾಗಿ ಅಭ್ಯಸಿಸದಿರುವದೇ ಕಾರಣ. ಹಿಂದೀ ಸೈನ್ಯದಲ್ಲಿ ವಿವಿಧ ಪರಿಸ್ಥಿತಿಗಳಲ್ಲಿ ಸೇವೆ ಮಾಡಿದ ನಾನು. ಯೋಗ್ಯವಾಗಿ ಸಂಘಟಿಸಿ ತರಬೇತಿಯಿತ್ತರೆ ಹಿಂದೀ ಸೈನಿಕರು ಜಗತ್ತಿನ ಅತ್ಯುತ್ತಮ ಬಲವಾಗುವದರಲ್ಲಿ ಸಂದೇಹವಿಲ್ಲೆಂದು ಮನಗಂಡಿದ್ದೇನೆ.

### ಅದರ ಆರಂಭ

ಇಸವಿ ೧೬೦೦ ರ ಕೊನೆಯ ದಿನ ಎಲಿಜಬೇಥ ರಾಣಿಯಿಂದ ಅನುಜ್ಞೆ ಹೊಂದಿ ಬ್ರಿಟಿಶ್ ಕಂಪನಿಯೊಂದು ಹಿಂದುಸ್ತಾನದಲ್ಲಿ ಕೆಲ ಕಾರಖಾನೆಗಳನ್ನು ಸ್ಥಾಪಿಸಿತು. ಅವುಗಳ ರಕ್ಷಣೆಗೆಂದು ಶಿಸ್ತಿಲ್ಲದ, ಸರಿಯಾದ ಆಯುಧಗಳಿಲ್ಲದ ಬ್ರಿಟಿಶ ಮತ್ತು ಹಿಂದೀ ಸೈನಿಕರನ್ನು ಪ್ರತಿ ಕಾರಖಾನೆಯಲ್ಲಿಯೂ ಇಟ್ಟುಕೊಳ್ಳಲಾಗಿತ್ತು. ೧೬೩೯ ರಲ್ಲಿ ಮದ್ರಾಸದಲ್ಲಿ ಒಂದು ಕೋಟೆ ಕಟ್ಟಲು ಪರವಾನಿಗೆ ಈ ಕಂಪನಿಗೆ ದೊರೆಯಿತು. ಮುಂದೆ ಬಂಗಾಲದ ಪಿಪ್ಲೀ ಎಂಬಲ್ಲಿಯೂ ಕೋಟೆ ಕಟ್ಟಿಕೊಳ್ಳಲು ಅವಕಾಶ ದೊರೆಯಿತು. ೧೬೬೮ ರಲ್ಲಿ ಮುಂಬಯಿ ದ್ವೀಪವನ್ನು ಚಾರ್ಲ್ಸ ಅರಸನಿಂದ ಈ ಕಂಪನಿ ಬಾಡಿಗೆಗೆ ಪಡೆಯಿತು. ಈ ಕೋಟೆಗಳಲ್ಲಿರಿಸಲ್ಪಟ್ಟ ಚಿಕ್ಕ ಸಶಸ್ತ್ರ ಬಲಗಳೆ ಮುಂದೆ ಇಲಾಖಾ ಸೈನ್ಯಗಳಾಗಿ ಬೆಳೆದವು.

ಈ ಪ್ರಕಾರ ಪ್ರಸ್ತುತ ಹಿಂದೀ ಸೇನೆಯ ಉಗಮ ಬ್ರಿಟಿಶ ಕಾರಖಾನೆಗಳ ಸಂರಕ್ಷಣೆಗಾಗಿ ಮತ್ತು ಅವರ ಬಗ್ಗೆ ಹಿಂದೀಯರಲ್ಲಿ ಗೌರವವನ್ನು ಉಂಟುಮಾಡುವಗೋಸುಗ ಹುಟ್ಟಿದ ಈ ಚಿಕ್ಕ ಬಲಗಳಲ್ಲಿ ಆಯಿತು. ೧೬೯೮ ರಲ್ಲಿ ಕಲಕತ್ತೆಯಲ್ಲಿ ಫೋರ್ಟ ವಿಲಿಯಮ್ಸ ಕೋಟೆ ಕಟ್ಟಲು ಅನುಜ್ಞೆ ದೊರಕಿತು. ಅದೇ ಸೈನ್ಯದ ಸನ್ನಿಧಿ ಕೇಂದ್ರವಾಯಿತು. ೧೭೪೮ ರಲ್ಲಿ ಮೇಜರ ಜನರಲ್ ಲಾರೆನ್ಸರ ಮುಖ್ಯ ಸೇನಾಧಿಪತ್ಯದ ಮೊಟ್ಟ ಮೊದಲನೆ ಬಾರಿ ಈ ಮೂರು ಇಲಾಖಾ ಸೈನ್ಯಗಳನ್ನು ಒಂದೇ ಅಧಿಪತ್ಯದ ಕೆಳಗೆ ತಂದು ಸಮಾವೇಶಗೊಳಿಸಲಾಯಿತು. ಈ ಅವಧಿಯಲ್ಲಿ ಇಂಗ್ಲಂಡಿಗೆ ಫ್ರಾನ್ಸಿನೊಡನೆ ಆಗಾಗ್ಗೆ ಯುದ್ಧಗಳು ಗಂಟು ಬೀಳುತ್ತಿದ್ದುದರಿಂದ ಹಿಂದುಸ್ತಾನದಲ್ಲಿರುವ ಫ್ರೆಂಚರೊಡನೆ ಹೋರಾಡಲು ಕಂಪನಿಯವರು ತಮ್ಮ ಬಲಗಳನ್ನು ಬೆಳೆಸಬೇಕಾಯಿತು.

೧೭೫೭ ರಲ್ಲಿ ಪ್ಲಾಸಿಯ ಕದನವನ್ನು ಕುಹಕದಿಂದ ಗೆದ್ದು ಲಾರ್ಡ ಕ್ಲೈವನು ಹಿಂದುಸ್ತಾನದಲ್ಲಿ ಬ್ರಿಟಿಶ ಸಾಮ್ರಾಜ್ಯದ ಅಸ್ತಿವಾರವನ್ನು ಹಾಕಿದಂದಿನಿಂದ, ಆ ವರೆಗೆ ಹಿಂದುಸ್ತಾನದಲ್ಲಿದ್ದ ಬ್ರಿಟಿಶರ ವಿದೇಶಿ ವ್ಯಾಪಾರಿ ಸ್ಪರ್ಧಾಳುಗಳ ವಿರುದ್ಧ ಮಾತ್ರ ಉಪಯೋಗಿಸಲ್ಪಡುತ್ತಿದ್ದ ಈ ಸೈನ್ಯಗಳು ಮುಂದೆ ಕಂಪನಿ ರಾಜ್ಯದ ವಿಸ್ತರಣೆಯ ಪ್ರತ್ಯಕ್ಷ ಸಾಧನವಾಗಿ ರೂಪುಗೊಂಡವು. ಮುಂದಿನ ಗವರ್ನರ ಜನರಲ್ಲರ ಕಾಲದಲ್ಲಿ ಹೆಚ್ಚು ಹೆಚ್ಚು ಪ್ರದೇಶಗಳು ಕಂಪನಿಯ ರಾಜ್ಯದಲ್ಲಿ ಸೇರಿಸಲ್ಪಡಲು ಇವುಗಳನ್ನು ಉಪಯೋಗಿಸಲಾಯಿತು. ೧೮೫೭ ರ ಸ್ವಾತಂತ್ರ್ಯಯುದ್ಧ—ಅಥವಾ ಇಂಗ್ಲೀಷರು ಹೇಳುವಂತೆ—ಬಂಡಾಯದಷ್ಟು ಹೊತ್ತಿಗೆ ಕಾಲ್ಬಲ, ಕುದುರೆ ಬಲ ಮತ್ತು ತೋಫು ಬಲವೆಂದು ಕಂಪನಿಯ ಸೈನ್ಯದಲ್ಲಿ ೨,೩೧,೭೮೦ ಸೈನಿಕರಿದ್ದರು.

ಹೀಗಿದ್ದರೂ ಈ ಹಿಂದೀ ಸೈನಿಕರ ಹೃದಯದಿಂದ ರಾಷ್ಟ್ರೀಯ ಭಾವನೆಯನ್ನು ಕಿತ್ತೊಗೆಯಲು ಉದ್ದೇಶಪೂರ್ವಕ ಪ್ರಯತ್ನಗಳು ಮಾಡಲ್ಪಟ್ಟಿದ್ದಿಲ್ಲ. ಎಲ್ಲ ಶಾಖೆಗಳಲ್ಲೂ ಒಂದು ಪ್ರಮಾಣದಿಂದ ಬ್ರಿಟಿಶ ಸೈನಿಕರಿದ್ದರೂ ಅವರು ಕೇವಲ ಮೇಲ್ವಿಚಾರಣೆ ನಡೆಸುತ್ತಿದ್ದರು. ಸೈನ್ಯದ ನೇರವಾದ ಆಡಳಿತೆ ಮತ್ತು ಆಜ್ಞಾಪಕ ಅಧಿಕಾರ ಹಿಂದೀ ಕಮೀಶನ್ಡ ಅಧಿಕಾರಿಗಳ ಕೈಯಲ್ಲೆ ಇತ್ತು. ಈ ಅಧಿಕಾರಿಗಳಲ್ಲಿಯೂ ಸೈನಿಕರಲ್ಲಿಯೂ ದೇಶಭಕ್ತಿ ಉಜ್ವಲವಾಗಿದ್ದುದರಿಂದಲೇ ವಿದೇಶಿಯರನ್ನು ಹೊರಗಟ್ಟುವ ಕರೆಬಂದಾಗ ಅವರೆಲ್ಲರೂ ಹಾರ್ದಿಕವಾಗಿ ಅದರಲ್ಲಿ ಸಹಕರಿಸಿದರು. ಬ್ರಿಟಿಶರು ಮಾತ್ರ ಇದನ್ನು ಮುಚ್ಚಿಟ್ಟು ಆ ಬಂಡಾಯಕ್ಕೆ ಕೆಲ ಕ್ಷುಲ್ಲಕ ಕಾರಣಗಳನ್ನು ಹೇಳಿದ್ದಾರೆ. ಬಂದೂಕಿಗೆ ಚರ್ಬಿ ಬಳಿದುದಕ್ಕೆ ಸೈನಿಕರು ಸಿಟ್ಟಿಗೆದ್ದುದ್ದರಿಂದ ಇಡೀ ದೇಶವೇ ಈ ಬಗೆಯಾದ ಹೋರಾಟವನ್ನು ಅನೇಕ ತಿಂಗಳುಗಳ ವರೆಗೆ ಕಠಿನತಮ ಪರಿಸ್ಥಿತಿಯಲ್ಲಿ ಸಾಗಿಸಿತೆಂದು ನಂಬುವದು ಅಸದಳ.

### ಸ್ವರೂಪ ಪರಿವರ್ತನೆ

ಬಂಡಾಯಗಾರರನ್ನು ಪೂರ್ಣ ಮುರಿದ ಬಳಿಕ ಹಿಂದೀ ಸೈನ್ಯದ ಭವಿತವ್ಯವನ್ನು ಹೇಗೆ ರೂಪಿಸಬೇಕೆಂಬ ಪ್ರಶ್ನೆಯೆದ್ದಿತು. ದೇಶದಲ್ಲಿ ''ಕಾಯಿದೆ ಸುವ್ಯವಸ್ಥೆ'' ಗಳನ್ನು ಕಾಪಾಡಲು ಮತ್ತು ಹೊರಗೆ ಬ್ರಿಟಿಶ ಸಾಮ್ರಾಜ್ಯವಾದಿ ಮಹತ್ವಾಕಾಂಕ್ಷೆಗಳ ಸಿದ್ಧಿಗೆ ಈ ಸೈನ್ಯ ಅವಶ್ಯವಿದೆಯೆಂದು ಕಂಪನಿಯಿಂದ ಆಡಳಿತೆಯನ್ನು ಕಿತ್ತುಕೊಂಡ ಬ್ರಿಟಿಶ ಸರಕಾರಕ್ಕೆ ಮನವರಿಕೆಯಾಗಿತ್ತು. ಆದರೆ ಅದು ಹಿಂದುಸ್ತಾನದಲ್ಲಿ ಬ್ರಿಟಿಶ್ ಆಳಿಕೆಗೆ ಗಂಡಾಂತರಪ್ರಾಯವಾಗುವಂತಿರಬಾರದಾಗಿತ್ತು. ಅದಕ್ಕೆ ಕೆಲ ಕ್ರಮಗಳನ್ನು ಒಡನೆ ಕೈಕೊಳ್ಳಲಾಯಿತು.

ಮೊದಲನೆಯದಾಗಿ, ಸೈನ್ಯದಲ್ಲಿ ಹಿಂದೀಯರ ಸಂಖ್ಯೆಯನ್ನಿಳಿಸಿ ಬ್ರಿಟಿಶರದನ್ನು ಹೆಚ್ಚಿಸಿ ೨॥ ಹಿಂದೀಯರಿಗೊಬ್ಬ ಬ್ರಿಟಿಶನಂತೆ ಪ್ರಮಾಣ ನಿರ್ದೇಶ ಮಾಡಲ್ಪಟ್ಟಿತು. ಅಲ್ಲದೆ ಬಂಡಾಯದಲ್ಲಿ ಸಕ್ರಿಯವಾಗಿ ಸೇರಿಕೊಂಡಿದ್ದ ವರ್ಗಗಳಿಂದ ಸೈನ್ಯಕ್ಕೆ ಭರ್ತಿ ಮಾಡುವದನ್ನು ನಿಲ್ಲಿಸಿಬಿಟ್ಟು ಹಿಂದುಸ್ತಾನದಲ್ಲಿ "ಕ್ಷತ್ರಿಯ" ಮತ್ತು "ಅಕ್ಷತ್ರಿಯ" ವರ್ಗಗಳ ಸುಳ್ಳು ಸಿದ್ಧಾಂತವನ್ನು ಪ್ರಚುರಗೊಳಿಸಿದರು. ಇನ್ನೊಮ್ಮೆ ಬ್ರಿಟಿಶರ ವಿರುದ್ಧ ಸೈನಿಕರು ಒಗ್ಗಟ್ಟಾಗದಂತೆ ಎಲ್ಲ ವಿಧದ ಪ್ರಾಂತಿಕ ಜಾತೀಯ ಭೇದಗಳಿಗೆ ಉತ್ತೇಜನ ದೊರೆವಂತೆ ಸೈನ್ಯದ ತುಣುಕುಗಳನ್ನು ಪುನಸ್ಸಂಘಟಿಸುವದೂ ಆಯಿತು. ಹಿಂದೀಯರನ್ನು ಕೇವಲ ಕಾಲು ಮತ್ತು ಕುದುರೆ ಬಲಗಳಿಗೆ ಮಾತ್ರ ಭರ್ತಿ ಮಾಡಿಕೊಂಡು ತೋಫು ಬಲವನ್ನು ಪೂರ್ಣವಾಗಿ ಬ್ರಿಟಿಶರ ಕೈಲಿಟ್ಟು ಹಿಂದೀ ಸೈನಿಕರಿಗೆ ಸಫಲವಾಗಿ ಬಂಡು ಹೂಡಲಾಗದಂತೆ ವ್ಯವಸ್ಥೆ ಮಾಡಿದರು. ಎರಡನೆ ಮಹಾಯುದ್ಧದ ವರೆಗೂ ಇದೇ ಧೋರಣೆ ಸಾಗಿತ್ತು. ಈ ಯುದ್ಧದಲ್ಲಿ ಮಾತ್ರ ಕೆಲ ಹಿಂದೀ ತೋಫು ಬಲಗಳು ನಿರ್ಮಿಸಲ್ಪಟ್ಟವೆ. ಕಮಿಶನ್ಡ ಅಧಿಕಾರಿ ವರ್ಗಕ್ಕೆ ಹಿಂದೀಯರನ್ನು ಭರ್ತಿಮಾಡಿಕೊಳ್ಳುವದನ್ನು ನಿಲ್ಲಿಸಿ ಆ ವರ್ಗವನ್ನು ಪೂರ್ಣ ಬ್ರಿಟಿಶೀಕರಣ ಮಾಡಿದರು. ವಾಯಿಸರಾಯ ಕಮೀಶನ ಪಡೆದ ಅಧಿಕಾರಿಗಳೆಂಬ ಹೊಸ ಹಿಂದೀ ಅಧಿಕಾರಿಗಳ ವರ್ಗವನ್ನು ಉಂಟುಮಾಡಿದರೂ ಅವರಿಗೆ ಆಜ್ಞಾಪಕ ಅಧಿಕಾರವಿಲ್ಲ. ಅತಿ ಹೊಸಬನಾದ ಬ್ರಿಟಿಶ ಲೆಫ್ಟಿನೆಂಟನೂ ಅತಿ ಹಿರಿಯ ವಾಯಿಸರಾಯ ಕಮೀಶನ್ಡ ಅಧಿಕಾರಿಗಿಂತ ಕೆಳ ದರ್ಜೆಯವನು! ಕೊನೆಯದಾಗಿ ಹಿಂದೀ ಸೈನಿಕರ ರಾಷ್ಟ್ರಪ್ರೇಮವನ್ನು ಪೂರ್ಣವಾಗಿ ನಂದಿಸಲು ಅವಶ್ಯವಿದ್ದುದನ್ನು ಮಾಡಲಾಯಿತು. ಜನತೆಯೊಡನೆ ಸೈನಿಕರು ಬೆರೆಯದಂತೆ ಅವರನ್ನು ಬೇರ್ಪಡಿಸಿಟ್ಟದ್ದಲ್ಲದೆ ಬ್ರಿಟಿಶ ಗುಪ್ತಚಾರರು ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿ ದೇಶದಲ್ಲಿ ಎದ್ದಿರುವ ರಾಜಕೀಯ ಜಾಗ್ರತಿ ಸೈನ್ಯಕ್ಕೆ ಸೋಂಕದಂತೆ ನೋಡಿಕೊಂಡರು.

ಸೈನ್ಯದ ಶಿಕ್ಷಣದ ಸಂಘಟನೆಯೆಲ್ಲ ಹಿಂದೀ ಸೈನಿಕನಿಗೆ ಬ್ರಿಟಿಶ ರಾಜ್ಯದ ಸಾಧಕಗಳನ್ನು ತಲೆಯಲ್ಲಿ ತುಂಬುವಗೋಸುಗವೇ ರೂಪಿಸಲ್ಪಟ್ಟು ಬ್ರಿಟಿಶರು ಹೊರಟುಹೋದರೆ ಅದು ದೇಶಕ್ಕೂ ತಮಗೂ ದೊಡ್ಡ ವಿಪತ್ತೆಂಬ ಭಾವನೆಯನ್ನು ಹುಟ್ಟಿಸುವಲ್ಲಿ ಸಫಲವಾಯಿತು. ಅಧಿಕಾರಿಗಳಲ್ಲಿ ಕೂಡ ರಾಷ್ಟ್ರೀಯ ಜಾಗ್ರತಿಯ ಲಕ್ಷಣ ಎಳ್ಳಷ್ಟು ತೋರಿದರೆ ಅದಕ್ಕೆ ಶಿಕ್ಷೆ ಕಾದಿತ್ತು. ಈ ಬಗೆಯ ವಿಷಾಕ್ತ ಶಿಕ್ಷಣ ಪದ್ಧತಿಯಿಂದ ಹಿಂದೀ ಸೈನಿಕನಲ್ಲಿ ಬಿಳಿ ಮನುಷ್ಯನು ಎಷ್ಟೇ ತಪ್ಪುಗಳಿದ್ದರೂ ತನಗಿಂತ ಹೆಚ್ಚಿನವನೆಂಬ ಭ್ರಾಂತಿ ಬೇರು ಬಿಡುವಂತಾಯಿತು. ತನ್ನ ದೇಶಬಾಂಧವನೊಬ್ಬನ ಕೆಳಗೆ ಹೋರಾಡುವದಕ್ಕಿಂತ ಬಿಳಿಯನ ನಾಯಕತ್ವವೇ ಒಳಿತೆಂಬ ಭಾವನೆ ಅವನಲ್ಲಿ ಕುಳಿತುಬಿಟ್ಟಿತು.

ಈ ಉಪಾಯಗಳು ಪೂರ್ಣ ಫಲಕಾರಿಯಾದವು. ಹಿಂದೀ ಸೈನ್ಯದ ಸ್ವಭಾವವನ್ನೆ ಅವು ಬದಲಿಸಿದವು. ಅದು ಬ್ರಿಟಿಶ ಸಾಮ್ರಾಜ್ಯವಾದದ ಕೈಯಲ್ಲಿಯ ಕತ್ತಿಯಾಗಿ ವರ್ತಿಸಲು ಸಂತೋಷದಿಂದ ಸಮ್ಮತಿಸಿತು. ದೇಶದಲ್ಲಿಯ ರಾಷ್ಟ್ರೀಯ ವಿದ್ರೋಹವನ್ನು ಹುರಿಯಬಡಿಯಲು ಅದನ್ನು ಉಪಯೋಗಿಸಿಕೊಳ್ಳಬಹುದಾಯಿತು. ಹಿಂದೀಯರ ವಿರುದ್ಧವೂ ನೆರೆಹೊರೆಯ ದುರ್ಬಲ ದೇಶಗಳ ವಿರುದ್ಧವೂ ಅವುಗಳನ್ನುಪಯೋಗಿಸಲು ಯಾವ ಆತಂಕವೂ ಉಳಿಯಲಿಲ್ಲ.

### ಎರಡು ಯುದ್ಧಗಳ ನಡುವೆ

೧೯೧೪—೧೮ ರ ಮಹಾಯುದ್ಧದಲ್ಲಿ ಅಸಂಖ್ಯ ಹಿಂದೀ ಸೈನ್ಯಗಳು ಹೆಚ್ಚುಕಡಿಮೆ ಎಲ್ಲ ಯುದ್ಧರಂಗಗಳಲ್ಲಿಯೂ ಹೋರಾಡಿದವು. ಪ್ರತಿಯೊಂದು ಕಡೆಯಲ್ಲಿಯೂ ಹಿಂದೀಯರಿಗೆ ಅಜರಾಮರ ಕೀರ್ತಿ ಲಭಿಸಿತು. ಹಿಂದೀ ಸೈನ್ಯದಲ್ಲಿ ಆಗ ಇದ್ದ ಸಂಘಟನೆಯ ಕೊರತೆ, ಪುರಾತನಕಾಲದ ಶಸ್ತ್ರಾಸ್ತ್ರಗಳು ಮತ್ತು ಹಿಂದೀಯರಿಗೆ ಸ್ಫೂರ್ತಿ ಕೊಡ

—ಪುಟ ೩ಕ್ಕೆ

---

* ಅರ್ಝಾದ ಹಿಂದ ಸೇನೆಯ ಪ್ರಸಿದ್ಧ ಕರ್ನಲ ಸಹಗಲರು ,,ಮುಂಬಯಿ ಕ್ರಾನಿಕಲ" ಪತ್ರಿಕೆಯಲ್ಲಿ ಒಂದು ಲೇಖಮಾಲೆ ಬರೆದು ಹಿಂದೀ ಸೈನ್ಯದ ಭೂತ ಭವಿತವ್ಯ, ಅದರ ಪರಿವರ್ತನೆ, ಅದರ ಗುಣ-ಮನೋಭಾವಗಳನ್ನೂ ಅದರ ಪುನರ್ಘಟನೆಯ ಉಪಾಯಗಳನ್ನೂ ಸೂಚಿಸಿದ್ದಾರೆ. ಅದರ ಸಾರವನ್ನು ,,ಕರ್ಮವೀರ''ದಲ್ಲಿ ಎರಡು ಲೇಖಾಂಕಗಳಲ್ಲಿ ಕೊಡಲಾಗುವದು. ಇದು ಮೊದಲನೆಯ ಲೇಖಾಂಕ.

# ಸಹಕಾರ ಆಂದೋಲನಕ್ಕೊಂದು ಹೊಸ ನೋಟ

( ಬರೆದವರು:— ಎಚ್. ಎಸ್. ಪಾಟೀಲ )

[ಮುಂಬಯಿಯ ಕಾಮರ್ಸಗ್ರಾಜುಯೇಟ್ಸ ಅಸೋಸಿಯೇಶನ್‌ನ ಪರವಾಗಿ ಇಂಡಿಯನ್ ಮರ್ಚಂಟ್ಸ ಚೇಂಬರದಲ್ಲಿ ಮುಂಬಯಿ ಮಂತ್ರಿ ಮಂಡಲದ ಅರ್ಥಸಚಿವರಾದ ಶ್ರೀ ವೈಕುಂಠ ರಾಯ ಮೆಹೆತಾ ಅವರು ಮೇ ೧೫ ನೆಯ ದಿನಾಂಕ ಮಾಡಿದ ಭಾಷಣ.]

ಕಾಂಗ್ರೆಸ ಮಂತ್ರಿಮಂಡಲದ ಅರ್ಥಸಚಿವನಾಗಿ ಇಂದು ನಾನು ತಮ್ಮೆದುರು ಮಾತನಾಡಲಿಕ್ಕೆ ನಿಂತಿದ್ದರೂ ನನ್ನ ಪ್ರಿಯ ವಿಷಯವಾದ ಸಹಕಾರದ ಬಗೆಯಲ್ಲಿಯೆ ನಾನೀಗ ಭಾಷಣ ಮಾಡುತ್ತಿರುವದು ನಿಮಗೆ ಸೋಜಿಗವೆನಿಸಬಹುದು. ಆದರೆ ಅದಕ್ಕೊಂದು ಕಾರಣವೂ ಉಂಟು. ನನ್ನ ಇಡಿಯ ಕಾರ್ಯಜೀವನವನ್ನೆಲ್ಲ ಈ ಸಹಕಾರ ಆಂದೋಲನದ ಸಲುವಾಗಿಯೆ ನಾನು ಮೀಸಲಾಗಿರಿಸಿದ್ದರೂ ಇಂದಿನ ಸನ್ನಿವೇಶದಲ್ಲಿ ಸಹಕಾರ ಆಂದೋಲನಕ್ಕೆ ಬಂದ ಒಂದು ಹೊಸ ಕಳೆಯ ಎಂದೂ ಬಂದಿರಲಿಲ್ಲ; ಅಂತೆಯೆ ನಾನಿಂದು ಅದೇ ವಿಷಯವಾಗಿ ಬುದ್ಧಿಪೂರ್ವಕವಾಗಿ ಸಂದರ್ಭವನ್ನು ತಂದುಕೊಂಡಿದ್ದೇನೆ. ಇಂದು ನಾಡಿನಲ್ಲಿ ಹೊಸ ಗಾಳಿಯು ಬೀಸತೊಡಗಿದೆ. ಜನರು ಹೊಸ ಹೆಜ್ಜೆಗಳನ್ನು ಕಾಯುತ್ತಲಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಸಹಕಾರದ ಸಂಬಂಧವಾಗಿ ನಾನು ವಿಚಾರಮಾಡುತ್ತಲೆ ಒಂದು ನಿರ್ಧಾರಕ್ಕೆ ಬಂದು ಹತ್ತಿರುವೆಯೆಂದೆನ್ನಬಹುದು. ಇಂದಿನ ಮಿತಿಯಲ್ಲಿ ಯೋಜನೆಯದೊಂದು ಬಿರುಗಾಳಿಯೆ ಬಿಟ್ಟಿದೆಯಲ್ಲವೆ? ಪ್ರತಿಯೊಂದು ನಮ್ಮ ಕಾರ್ಯಕ್ಕೆ ಯೋಜನೆ ಬೇಕು ಎನ್ನಹತ್ತಿದ್ದಾರೆ ಈಗ. ಅಂತೆಯೆ ನಾನು ಮೊದಲು ಯೋಜನೆ ಮಾಡುತ್ತಿರಲು ಈ ಯೋಜನೆಯು ಪ್ರಜಾಪ್ರಭುತ್ವದ ಮಟ್ಟದಲ್ಲಿ, ಎರಕದಲ್ಲಿ ಚೌಕಟ್ಟಿನಲ್ಲಿ ಜರಗಬಹುದೆ ಎಂಬುದೆ ನನ್ನ ಸಮಸ್ಯೆಯಾಗಿತ್ತು. ಒಂದು ಬದಿಯಲ್ಲಿ ಜರ್ಮನಿಯ ಹೊಸಬಾಳು ಒಂದು ಬದಿಯಲ್ಲಿ ಅಮೇರಿಕೆಯ ಹೊಸಹಾದಿ (New Deal) ಇನ್ನೊಂದು ಬದಿಯಿಂದ ರಸಿಯದ ನವೀನ ಯೋಜನೆಗಳು ಇವುಗಳನ್ನೆಲ್ಲ ನೋಡಲಾಗಿ ವ್ಯಕ್ತಿಸ್ವಾತಂತ್ರ್ಯ, ಸಾಮಾನ್ಯನ ಸರ್ವಾಧಿಕಾರಿತ್ವ ಇವು ಎಲ್ಲಿಯೊ ಮಾಯವಾಗಿ ಯೋಜಿತ ಸಮಾಜದಲ್ಲಿ ಅಷ್ಟಮಟ್ಟಿಗೆ ಪ್ರಜಾಪ್ರಭುತ್ವವು ಕಳೆಗುಂದಿದೆ ಎಂದೆನಿಸಿತು. ಅಂತೆಯೆ ಯೋಜನೆಯು ಆ ವಿಶುದ್ಧವಾದ ಸ್ಥಿತಿಯನ್ನು ತಲುಪಬೇಕಾದರೆ ಒಲವು ಮತ್ತು ಒಪ್ಪಿಗೆ, ಇವುಗಳು ಅಗತ್ಯ; ಮತ್ತು ಹಾಗೆ ಆತ್ಮೀಯತೆ, ಆಕರ್ಷಣಗಳಿಂದ ಯೋಜನೆಯನ್ನು ರಚಿಸುವದಾದರೆ ಅದಕ್ಕೆ ಸಹಕಾರವೆ ಸರಿಯಾದ ಹೆಸರು ಎಂದು ನನಗೆ ಅನಿಸುತ್ತದೆ.

ಇನ್ನು ಸಹಕಾರ ಎಂದರೇನು ಎಂಬುದನ್ನಷ್ಟು ತಮಗೆ ಕೆಲವರಿಗಾದರೂ ಹೇಳಬಯಸುತ್ತೇನೆ. ಅಲ್ಡಸ್ ಹಕ್ಸಲೇ ಎಂಬ ಆಂಗ್ಲ ತತ್ವಜ್ಞಾನಿಯು ತನ್ನ ( ಎಂಡ್ಸ್ ಎಂಡ ಮೀನ್ಸ್) ಆದರ್ಶ ಮತ್ತು ಉಪಾಯ ಎಂಬ ಪುಸ್ತಕದಲ್ಲಿ ಈ ಬಗೆಯಾಗಿ ಸಹಕಾರವನ್ನು ವ್ಯಾಖ್ಯೆಯಾಗಿ ಉಲ್ಲೇಖಿಸಿದ್ದಾನೆ. " ಕಾಯಕದ ಸಾಧನೆಗಳ ಒಟ್ಟು ಒಡೆತನ; ಅಧಿಕಾರದ ವಿಕೇಂದ್ರೀಕರಣ; ಸ್ವಯಂಪ್ರೇರಣೆಯ ಮತ್ತು ಸ್ವಂತ ಹೊಣೆಗಾರಿಕೆಯನ್ನರಿತ ಸ್ತ್ರೀಪುರುಷರ ಚಿಕ್ಕ ಚಿಕ್ಕ, ಸ್ವತಂತ್ರ ಆದರೂ ಪರಸ್ಪರ ಸಂಬಂಧವುಳ್ಳ ಅನೇಕ ಸಂಗಡಗಳ ಸಮಾಜವೆ ಸಹಕಾರದ ಸಮಾಜ ಎಂದೆನ್ನಬಹುದು" ಇದೆ ಇಂದು ನಮ್ಮ ಗುರಿಯಾಗಿದೆಯೆಂದರೆ ಎಷ್ಟೂ ತಪ್ಪೆನಿಸಲಾರದು.

ಅದಕ್ಕೆ ಕಾರಣ ಬೇಕಾದರೆ ಈ ಸಲದ ನಮ್ಮ ಕಾಂಗ್ರೆಸಿನ ಆಯ್ಕೆಯ ಘೋಷಣೆಯನ್ನು ಪರಿಶೀಲಿಸಬಹುದು. ಈ ಘೋಷಣೆಯು ಕೇವಲ ಒಂದು ಇಲೆಕ್ಶನ್ ಪ್ರತಿಜ್ಞಾಪತ್ರಿಕೆಯ ನಾಟಕವೆಂದೆನಿಸದೆ ಈ ಸಲ ಅದೊಂದು ಅಧಿಕೃತವಾದ ಕಾರ್ಯಕ್ರಮದ ರೂಪರೇಷೆಯಾಗಿರುವದು ವಿಶೇಷವಾದ ಮಾತು. ಅದರಲ್ಲಿ, ನೀವು ನೋಡಿದ್ದರೂ ನೋಡಿರಬಹುದು, ಮೂರು ಮುಖ್ಯ ಭಾಗಗಳಿವೆ. ಮೊದಲನೆಯದಾಗಿ ಮೂಲಭೂತ ತತ್ವಗಳು: ಎರಡನೆಯದಾಗಿ ಸಾಮಾಜಿಕ ಸೌಕರ್ಯಗಳು ಮತ್ತು ಮೂರನೆಯದಾಗಿ ಅರ್ಥಿಕ ಯೋಜನೆ. ಮೊದಲಿನ ಎರಡು ವಿವರಗಳ ವಿಶೇಷ ಚರ್ಚೆಯಲ್ಲಿ ಈಗ ಹೊತ್ತುಗಳೆಯದೆ ಕೊನೆಯದೂ ಅತ್ಯಂತ ಮಹತ್ವದ್ದೂ ಆದ ಮೂರನೆಯ ವಿಷಯವನ್ನು ಕುರಿತು ತುಸು ವಿಚಾರಮಾಡುವದು ಈಗ ಅಗತ್ಯವೆನಿಸಿದೆ.

## ಒಕ್ಕಲತನ, ಉದ್ಯೋಗಗಳ ಅಭಿವೃದ್ಧಿ

ನಮ್ಮ ದೇಶದಲ್ಲಿ ಒಕ್ಕಲತನವೆ ಆಗಿರಲಿ ಉದ್ಯೋಗಗಳೆ ಆಗಿರಲಿ ತೀರ ಸಣ್ಣ ಪ್ರಮಾಣದಲ್ಲಿ ನಡೆದಿರುವದೊಂದು ವಿಶೇಷವೆಂದೆನ್ನಬಹುದು. ಅದರಲ್ಲಿಯೂ ಇತ್ತಿತ್ತಲಾಗಿ ಒಕ್ಕಲತನದ ಮೇಲೆಯೆ ತಮ್ಮ ಉಪಜೀವನಕ್ಕಾಗಿ ನಂಬಿಕೊಂಡು ಇದ್ದ ಜನರ ಸಂಖ್ಯಾಪ್ರಮಾಣವು ದಿನದಿನಕ್ಕೆ ಬೆಳೆಯಹತ್ತಿದೆ. ಅದೊಂದು ನಮ್ಮ ಪಾರತಂತ್ರ್ಯದ ಪರಮಪವಿತ್ರವಾದ ಪ್ರಶಸ್ತಿಯೆಂದೆನ್ನಬಹುದು. ಅದಕ್ಕೇನು ಅಂಕಿ-ಸಂಖ್ಯೆಗಳ ಅವಶ್ಯಕತೆಯೂ ಇಲ್ಲ. ಅದನ್ನು ಸಿದ್ಧಮಾಡಿ ತೋರಿಸಲಿಕ್ಕೆ ಈಗ ಅನೇಕ ವರುಷಗಳ ಕೆಳಗೆ ಸರ್ ಎಂ. ವಿಶ್ವೇಶ್ವರಯ್ಯ ಅವರು ತಮ್ಮ ಪುನರ್ರಚನೆಯ ಪುಸ್ತಕದಲ್ಲಿ ಈ ಬಗೆಯಾಗಿ ಬರೆದಿದ್ದಾರೆ. ೧೮೭೨ ರಲ್ಲಿ ನೂರಕ್ಕೆ ೫೭ ಜನರು ಭೂಮಿಯನ್ನವಲಂಬಿಸಿಕೊಂಡಿದ್ದುದು ಈಗ ೧೯೪೧ ರಲ್ಲಿ ಅದು ಎಪ್ಪತ್ತೊಂದು ಎಪ್ಪತ್ತೆರಡಕ್ಕೇರಿದೆ. ಇದು ನಮ್ಮ ದುರದೃಷ್ಟವೆಂದೇನು ತಿಳಿದುಕೊಳ್ಳಬಾರದು. ಇಂದಿನ ಔದ್ಯೋಗೀಕರಣವು ಭರದಿಂದ ಸಾಗಿದ್ದರೂ ಹೊಸ ಮತ್ತು ಹಳೆಯ —ರಾಷ್ಟ್ರಗಳಿಗೆ ಸಮನಾಗಿಯೆ, ಬೆಳೆಯುತ್ತ—ಜಗಿಯುತ್ತ ನಡೆದ ಜನಸಂಖ್ಯೆಗೆ ಸಾಲುವಷ್ಟು ಅನ್ನ—ನೀರುಗಳನ್ನು ಪೂರೈಸಬೇಕಾದರೆ ಸಾಕುಬೇಕಾಗಿ ಹೋಗಿದೆ ಅಂತೆಯೆ ಕೇವಲ ತುಣುಕು ಯಂತ್ರವನ್ನು ಅಣಿಮಾಡಿಕೊಂಡು ಆಟಿಗೆಗಳಂತಹ ಒಡವೆಗಳನ್ನು ಹುಟ್ಟಿಸುವದಕ್ಕಿಂತ ಜೋಡು ಕೆಲಸಗಳನ್ನು ಕೊಟ್ಟು ಸಣ್ಣ ಪ್ರಮಾಣದ ಉಪಭೋಗದ ವಸ್ತುಗಳನ್ನು ಹೊರಡಿಸುವದ ಹೆಚ್ಚಿನ ಜಾಣತನ ಎಂಬುದು ಎಲ್ಲರಿಗೂ ಮನವರಿಕೆಯಾಗಿದೆ. ಕಾರಣ ಈಗ ನಾನು ದೊಡ್ಡ ಉದ್ಯಮಗಳು ಚಿಕ್ಕ ಕಸಬುಗಳು ಇವುಗಳ ಗುಣಾವಗುಣ, ಲೋಪ-ಲಾಭಗಳನ್ನು ಎಣಿಸುತ್ತ ಹೋಗದೆ, ಚಿಕ್ಕ ಪ್ರಮಾಣದ ಉದ್ಯಮಗಳಿಂದ ಏನು ಸಾಧ್ಯವಾಗಬಹುದು ಎಂಬುದಕ್ಕಿಂತ ಚಿಕ್ಕ ಉದ್ಯಮಗಳನ್ನು ನಮ್ಮಂತಹ ಪರಿಸ್ಥಿತಿಯಿದ್ದ ದೇಶಗಳಲ್ಲಿ ಸಹಕಾರ ತತ್ವಗಳಿಗನುಸಾರವಾಗಿ ಸಾಗಿಸುವದು ಎಷ್ಟು ಹಗುರಾಗಿದೆ ಎಂಬುದನ್ನು ಮಾತ್ರ ಹೇಳುವೆ.

## ಸಹಕಾರದ ಮೂಲ ತತ್ವ

ಈಗ ಸಹಕಾರವೆಂದರೆ ಒಬ್ಬ ಒಕ್ಕಲಿಗನಿಗೆ ಪತ್ತಿನ ಮೇಲೆ ಸಾಲವನ್ನು ಕೊಡುವದು ಮಾತ್ರ ಅಲ್ಲ. ಅದು ಒಬ್ಬ ಕಾರ್ಮಿಕ, ಒಬ್ಬ ಕೂಲಿಕಾರ, ಒಬ್ಬ ಕೆಲಸಗಾರ, ಒಬ್ಬ ಕಾರ್ಖಾನೆಯದವ ಇಂತಹ ಎಲ್ಲ ಬಗೆಯ ಜನರಿಗೂ ಉಪಯುಕ್ತವಾದ ಒಂದು ಜೀವನದ ರೀತಿ; ಬಾಳ ಬಗೆ. ಇಂದು ನಾವು ಒಂದು ಪತ್ತಿನ ಸಂಘ; ಒಂದು ಮಾರಾಟ ಸಂಘ ಇಲ್ಲವೆ ಒಂದು ಕಟ್ಟಡದ ಸಂಘವನ್ನು ಮಾತ್ರ ಸಹಕಾರ ತತ್ವಗಳಿಂದ ಆರಂಭ ಮಾಡಿದರೆ ಆಗದು ನಮ್ಮ ಕೆಲಸ. ಕಾಂಗ್ರೆಸ್ಸಿನ ಇಂದಿನ ಘೋಷಣೆಯಲ್ಲಿ ಅಂತಹ ಅರ್ಥವೆ ಇಲ್ಲ. ಸಹಕಾರವು ನಮ್ಮ ಜೀವನದ ಪ್ರತಿಯೊಂದು ಶಾಖೆಯಲ್ಲಿಯೂ ಹರಿದಾಡುವ ರಕ್ತವಾಗಬೇಕು. ಪ್ರತಿಯೊಬ್ಬ ವ್ಯಕ್ತಿ-ಸಂಸ್ಥೆ-ಸಮಾಜಕ್ಕೆ ಉಸಿರಾಡುವ ಗಾಳಿಯಂತಾಗಬೇಕು ಈ ಆಂದೋಲನ. ಬಾಳ ಬೆಡಗನ್ನೆ ಬದಲಿಸುವ ಹೊಸ ನೋಟ ಬೇಕು ಅದಕ್ಕೆ!

ಈ ದೃಷ್ಟಿಯಿಂದ ನೋಡಲಾಗಿ ಹಳ್ಳಿ-ಹೊಳಲುಗಳಲ್ಲಿಯ ಸಾಹುಕಾರರನ್ನು ಮೂಲೆಗೆಳೆಯಲಿಕ್ಕೆಂದು ಮಾಡಿದ ಉಪಾಯ ಈ ಸಹಕಾರವೆ ಸೋಗು ಎಂಬುದು ಮಾತ್ರ ಸುಳ್ಳು ಎಂದೆನಿಸಿರಲಿಕ್ಕೆ ಸಾಕು. ಹಳ್ಳಿಗನೆ ಇರಲಿ ಪಟ್ಟಣಿಗನೆ ಇರಲಿ ಅತನ ಸಾಮಾಜಿಕ ಸಂಬಂಧದ ವಿಚಾರವೆ ಈಗ ಬದಲಾಗಬೇಕು. ಎಲ್ಲರಿಗಾಗಿ ತಾನು; ತನಗಾಗಿ ಎಲ್ಲರೂ ಎಂಬುದನ್ನು ನೆನಪಿಡಬೇಕಷ್ಟೆ ಅಲ್ಲದೆ ತನ್ನಿಂದ ಎಲ್ಲ ಎಂಬುದನ್ನು ಮರೆಯಬೇಕು.

ಈ ಬಗೆಯಾಗಿ ಸಾಲ ಕೊಡುವ ವಿಷಯವಾಗಿಯು ಕೂಡ ಸರಕಾರದವರು ತುಂಬಾ ವಿಚಾರ ಮಾಡಹತ್ತಿದ್ದಾರೆ. ಒಳಗಡೆ ಕೇಂದ್ರ ಸರಕಾರದವರು ನಿಯಮಿಸಿದ ವ್ಯವಸಾಯ ಧೋರಣ ಸಮಿತಿಯವರು ಸಲ್ಲಿಸಿದ ವರದಿಯು ಅತ್ಯಂತ ಉಪಯುಕ್ತವಾಗಿದೆ. ಅದನ್ನು ಸರಕಾರದವರು ಇನ್ನೂ ಜನರಿಗಾಗಿ ಪ್ರಸಿದ್ಧಗೊಳಿಸಿರದಿದ್ದರೂ ಅನೇಕ ಸಂದರ್ಭಗಳಲ್ಲಿ ಅನೌಪಚಾರಿಕವಾಗಿದ್ದರೂ ಗಂಭೀರವಾದ ಸೂಚನೆಗಳನ್ನು ಮಾಡಿದ್ದಾರೆ. ಆ ಮೇರೆಗೆ ಕೇವಲ ದುಡ್ಡನ್ನು ಸಾಲವಾಗಿ ಕೊಡದೆ ಒಕ್ಕಲಿಗನಿಗೆ ಬೇಕಾಗುವ ಆತನ ವ್ಯವಸಾಯದ ಸಾಮುಗ್ರಿಗಳ ರೂಪವಾಗಿ ಅದನ್ನು ಪೂರೈಸಬೇಕು ಎಂಬುದೇ ಅದರ ಆಶಯವಾಗಿದೆ. ಗೊಬ್ಬರಗಳು, ಬಾವಿಗಳು, ಕಾಲುವೆಗಳು ಸಲಕರಣೆಗಳು ಇಲ್ಲವೆ ಮಾರಾಟ ಇಂತಹ ಕಾರಣಗಳಿಗಾಗಿ ಅವನಿಗೆ ಯಾವ ತೊಂದರೆಯೂ ಬರದಂತೆ ಸಹಕಾರದಿಂದ ನೋಡಿಕೊಳ್ಳುವದೆ ಇಂದಿನ ಹೊಸ ರೀತಿಯಾಗಿದೆ. ಇಂದು ಪತ್ತಿನ ಸಂಘದೊಡನೆಯೆ ಮಾರಾಟದ ಸಂಘಗಳನ್ನು ಸಂಗಡಿಸುವದು ವ್ಯವಹಾರ್ಯವಿಷ್ಟೆ ಅಲ್ಲದೆ ಲಾಭದಾಯಕವೂ ಎನಿಸಹತ್ತಿದೆ.

ಜೀವನದಲ್ಲಿ ಜರುಗಿದ ಒಂದು ಹೊಸ ಪ್ರಯೋಗವು ನಮ್ಮ ನಾಡಿನಲ್ಲಿ ಕೂಡ ಫಲಪ್ರದವಾಗಬಹುದು ಎಂದು ನಮ್ಮ ಅಭಿಪ್ರಾಯವಾಗಿದೆ. ಅಲ್ಲಿಯಂತೆ ಇಲ್ಲಿ ಕೂಡ ಉದ್ಯಮಿ ಸಂಘಗಳನ್ನು ( Indusesoes ) ಸಹಕಾರ ತತ್ವಗಳ ಮೇಲೆ ಸಣ್ಣ ಪ್ರಮಾಣದಲ್ಲಿ, ಆರಂಭಿಸಿದರೆ ನಮ್ಮ ಜೀವ

-೧೬ನೇ ಪುಟಕ್ಕೆ







# ಟೀಕೆ-ಟಿಪ್ಪಣೆಗಳು

## ಮಹಾತ್ಮರು ದೀರ್ಘಾಯುಗಳಾಗಲಿ

ಮಹಾತ್ಮಾ ಗಾಂಧಿಯವರು ೩೦ನೆಯ ತಾರೀಕು ರಾತ್ರಿ ಮುಂಬಯಿಯಿಂದ ಪುಣೆಗೆ ಸ್ಪೆಶಲ್ ಗಾಡಿಯಲ್ಲಿ ಬರುವಾಗ ಬೆಳಗಿನ ಎರಡುಗಂಟೆ ಸುಮಾರಿಗೆ ನೇರಳದ ಹತ್ತಿರ ಹಳಿಯ ಮೇಲಿಟ್ಟಿದ್ದ ಮೂರು ಕಲ್ಲು ಬಂಡೆಗಳಿಗೆ ಹಾಯ್ದು ಅಪಘಾತಕ್ಕೀಡಾಯಿತು. ಇದರಿಂದ ಅದು ೩॥ ಗಂಟೆ ತಡ ಮಾಡಿ ಪುಣೆ ಮುಟ್ಟಿತು. ಆದರೆ ಯಾರಿಗೂ ಅಪಘಾತವಾಗಲಿಲ್ಲ. ಇಂಜಿನಕ್ಕೆ ಮಾತ್ರ ಸ್ವಲ್ಪ ಧಕ್ಕೆಯಾಯಿತು. ಮಹಾತ್ಮರ ಬಂಡಿಗೆ ಆದ ಈ ಅಪಘಾತದ ಸುದ್ದಿಯನ್ನು ಕೇಳಿ ಭರತಖಂಡದಲ್ಲಷ್ಟೇ ಅಲ್ಲ ಇಡೀ ಜಗತ್ತಿನಲ್ಲಿಯೆ ಕಳವಳವುಂಟಾಗಿದೆ. ಮಹಾತ್ಮರು ಸುಖರೂಪ ಪಾರಾದುದಕ್ಕಾಗಿ ಬಂದ ಅಭಿನಂದನ ಪತ್ರಗಳನ್ನು ನೋಡಿದರೆ ಈ ಮಾತು ಸ್ಪಷ್ಟವಾಗುವುದು. ಮಹಾತ್ಮರಂಥ ಶಾಂತ, ಅಜಾತಶತ್ರುಗಳ ಕೊಲೆ ಮಾಡಲು ಪ್ರಯತ್ನಿಸಿದ ಈ ಹೇಯ ಕೃತ್ಯವನ್ನು ಎಷ್ಟು ನಿಷೇಧಿಸಿದರೂ ಕಡಿಮೆಯೆ. ಈ ಸ್ಪೆಶಲ್ ಗಾಡಿಯು ಬರುವ ವೇಳೆಯನ್ನು ತಿಳಿದುಕೊಂಡು ಮುಂಬಯಿಯಲ್ಲಿಯ ಯಾವುದೋ ಒಂದು ಅಜ್ಞಾತ ವ್ಯಕ್ತಿಯು ಅವರ ಕೊಲೆ ಮಾಡಲು ಪ್ರಯತ್ನಿಸಿತೆಂದು ಮಾರ್ನಿಂಗ ಸ್ಟಾಂಡರ್ಡ ಪತ್ರಿಕೆ ಪ್ರಸಿದ್ಧಿಸುತ್ತದೆ. ಮಾಲಗಾಡಿಯನ್ನು ಲೂಟಿಮಾಡುವ ಪ್ರಯತ್ನ ಹಲ ದಿನಗಳಿಂದ ನಡೆದಿದ್ದು ಇದೂ ಅಂಥ ಪ್ರಯತ್ನವೇ ಎಂದೂ ಮಹಾತ್ಮರ ಸ್ಪೆಶಲ್ ಗಾಡಿಯ ನಿಮಿತ್ತ ಗುಡ್ಸಗಾಡಿ ತಡವಾಗಿ ಹೊರಟದ್ದರಿಂದ್ದ ಈ ಸ್ಪೆಶಲ್ ಗಾಡಿಯನ್ನುರುಳಿಸುವ ಪ್ರಯತ್ನ ನಡೆಯಿತೆಂದೂ ಹೇಳಲಾಗುತ್ತದೆ. ಅದೇನೇ ಇದ್ದರೂ ಮಹಾತ್ಮರ ಕೊಲೆ ಮಾಡುವಂಥ ನಿಂದ್ಯಕೃತ್ಯವು ಇದಾಗಿದ್ದರೆ ಇಂಥ ಹೇಸಿ ಕೃತ್ಯವು ಬೇರೆ ಯಾವುದೂ ಇರಲಾರದು. ಮುಂಬಯಿ ಸರಕಾರದವರು ಅಪರಾಧಿಗಳನ್ನು ಹುಡುಕಲು ಎಲ್ಲ ಬಗೆಯ ಪ್ರಯತ್ನ ಮಾಡಲು ವಿಧಿಸಿದ್ದು ಸ್ತುತ್ಯವಾಗಿದೆ. ಮಹಾತ್ಮರು ಈ ಅಪಘಾತದಿಂದ ಪಾರಾದುದಕ್ಕಾಗಿ ಅವರನ್ನು ಅಂತಃಕರಣಪೂರ್ವಕವಾಗಿ ಅಭಿನಂದಿಸುತ್ತೇವೆ.

## ಜಾತೀಯ ದೊಂಬಿಗಳು

ಇತ್ತೀಚೆಗೆ ಹಿಂದುಸ್ಥಾನದಲ್ಲಿ ಜಾತೀಯ ದೊಂಬಿಗಳು ಹೆಚ್ಚುತಿರುವುದು ಪರಸ್ಪರರಲ್ಲಿದ್ದ ಅಸಹನೆಯ ಲಕ್ಷಣವೆಂದು ಧಾರಾಳವಾಗಿ ಹೇಳಬಹುದಾಗಿದೆ. ಬಹಳ ಚಿಲ್ಲರೆ ಕಾರಣಗಳಿಗಾಗಿ ಪ್ರಾರಂಭವಾದ ತಿಕ್ಕಾಟವು ಬಹುಬೇಗ ಜಾತೀಯ ದೊಂಬಿಯಲ್ಲಿ ಪರಿಣಮಿಸುತಿರುವುದು ಕಂಡು ಬಂದಿದೆ. ಇಂಥ ದುಃಸ್ಥಿತಿಯನ್ನು ಆದಷ್ಟು ಬೇಗ ಹೋಗಲಾಡಿಸುವುದು ಅವಶ್ಯವಾಗಿದೆ. ಅಹಮದಾಬಾದ ಇತ್ತೀಚೆಗೆ ನಡೆದ ದೊಂಬಿಯಲ್ಲಿ ಮೂರು ದಿನಗಳಲ್ಲಿ ಒಟ್ಟು ೩೦ ಜನರು ಸತ್ತಿದ್ದು ೨೦೮ ಜನರಿಗೆ ಗಾಯಗಳಾಗಿವೆಂದು ಪ್ರಸಿದ್ಧವಾಗಿದೆ. ಅಹಮದಾಬಾದದಂಥ ಒಳ್ಳೆ ಚಟುವಟಿಕೆಯ ನಗರ ಈಗ ನಿರ್ಜನ ನಗರದಂತೆ ಕಾಣುತಿದ್ದು ಪೋಲೀಸ ಮತ್ತು ಸೈನಿಕರ ಹೊರತು ಬೇರೆ ಯಾರೂ ಬೀದಿಗಳಲ್ಲಿ ಕಾಣುವುದಿಲ್ಲ. ಅಂಗಡಿಗಳು ಮುಚ್ಚಿವೆ. ಗಿರಣಿಗಳು ನಡೆಯುವುದಿಲ್ಲ. ವ್ಯವಹಾರ ಕಟ್ಟಾಗಿ ಹೋಗಿದೆ. ಇಂಥ ದುರಂತ ಪರಿಸ್ಥಿತಿ ಪ್ರಾಪ್ತವಾಗಬೇಕಾದರೆ ಪರಸ್ಪರರಲ್ಲಿ ಎಷ್ಟೊಂದು ಅಸಹನೆ, ದ್ವೇಷ ದೊಂಬಿಪ್ರವೃತ್ತಿ ಯಿದೆಂಬುದು ಸ್ಪಷ್ಟವಾಗುವುದು. ಆಯಾ ಜಾತಿಗಳಲ್ಲಿಯ ಕಿಡಿಗೇಡಿಗಳೆ ಇಂಥ ದೊಂಬಿಗೆ ಕಾರಣರೆಂಬುದನ್ನು ಯಾರೂ ಮರೆಯಲಾಗದು. ಆದುದರಿಂದ ಆಯಾ ಜಾತಿಗಳ ಸನ್ಮಾನ್ಯ ಧುರೀಣರು ಇಂಥ ಕಿಡಿಗೇಡಿಗಳನ್ನು ಹುಡುಕಿ ತೆಗೆದು ಅವರನ್ನು ನಿಯಂತ್ರಣದಲ್ಲಿಡಬೇಕು. ಮುಂಬಯಿ ಸರಕಾರದ ಗೃಹಮಂತ್ರಿಗಳಾದ ಶ್ರೀ ಮುರಾರಜಿ ದೇಸಾಯಿಯವರು ಸ್ವತಃ ಅಹಮದಾಬಾದಿಗೆ ಹೋಗಿ ಬೇಗ ಶಾಂತತೆಯನ್ನು ಪ್ರಸ್ಥಾಪಿಸುವಲ್ಲಿ ಯಶಸ್ವಿಗಳಾದುದು ಅಭಿನಂದನೀಯ. ಅಲ್ಲಲ್ಲಿನ ವಿವಿಧ ಜಾತಿಗಳ ಜನರು ಸಮಿತಿಗಳನ್ನು ನೇಮಿಸಿಕೊಂಡು ಜಾತೀಯ ಸೌಹಾರ್ದವನ್ನು ಶಾಂತಿಯನ್ನು ಸ್ಥಾಪಿಸುವುದಕ್ಕಾಗಿ ಪ್ರಯತ್ನಿಸಬೇಕೆಂದು ಸೂಚಿಸುತ್ತೇವೆ.

## ಗ್ರಾಮಪಂಚಾಯತಿಗಳು

ಮುಂಬಯಿ ಸರಕಾರದವರು ಗ್ರಾಮಪಂಚಾಯತಿ ಕಾಯದೆಯಲ್ಲಿ ತಿದ್ದುಪಡಿ ಮಾಡಿ ಅವುಗಳು ಹೆಚ್ಚು ಕಾರ್ಯಕ್ಷಮವಾಗುವಂತೆ ಮಾಡಬೇಕೆಂದು ಬಗೆದಿದ್ದಾರೆ. ಬ್ರಿಟಿಶರು ಹಿಂದುಸ್ತಾನಕ್ಕೆ ಬರುವ ಮೊದಲು ಇಲ್ಲಿಯ ಗ್ರಾಮಪಂಚಾಯತಿಗಳು ಅವೆಷ್ಟು ಕಾರ್ಯಕ್ಷಮವಾಗಿದ್ದವೆಂಬುದು ಇತಿಹಾಸವು ಸಾರಿಹೇಳುತ್ತದೆ. ಗ್ರಾಮಪಂಚಾಯತಿಗಳೆ ಆಯಾ ಗ್ರಾಮಗಳಲ್ಲಿನ ಆಡಳಿತವನ್ನು ಸರಾಗವಾಗಿ ನಡೆಸುತಿದ್ದವು. ಗ್ರಾಮಗಳಲ್ಲಿಯ ಪ್ರಮುಖ ಘಟಕಗಳಿಗೆ ಇವುಗಳಲ್ಲಿ ಪ್ರತಿನಿಧಿತ್ವವಿದ್ದಿತು. ಅಂಥ ಮಾದರಿಯ ಗ್ರಾಮಪಂಚಾಯತಿಗಳನ್ನು ಮತ್ತೆ ಅಸ್ತಿತ್ವದಲ್ಲಿ ತರಲು ಮುಂಬಯಿ ಮಂತ್ರಿಮಂಡಲದವರಿದೀಗ ಅಣಿಯಾಗಿರುವರು. ಮಹಾತ್ಮರ ಆಶೀರ್ವಾದದಿಂದ ಔಂಧ ಸಂಸ್ಥಾನದಲ್ಲಿ ಇಂಥ ಗ್ರಾಮಪಂಚಾಯತಿಗಳು ಆಡಳಿತ ಸಾಗಿಸಿವೆ. ನಮ್ಮ ಹಳ್ಳಿಗಳು ಮೊದಲಿನಂತೆ ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿ ಮತ್ತು ಸ್ವಯಂಪೂರ್ಣವಿರದಿದ್ದುದರಿಂದ ಆರ್ಥಿಕ ತಳಹದಿಯೆ ಕೆಟ್ಟು ಸಾಮಾಜಿಕ ರಾಜಕೀಯ ತಳಹದಿ ಶಿಥಿಲವಾಗಿದೆ. ಹಳ್ಳಿಯ ಆರ್ಥಿಕ ಪರಿಸ್ಥಿತಿಯೆ ಕೆಟ್ಟು ಹೋದ್ದರಿಂದ ಹಳ್ಳಿಗಳು ಮೊದಲಿನಂತೆ ಸುಖಸಮೃದ್ಧಿಗಳ ಬೀಡಾಗದೆ ಬಣಗಳ, ಸ್ಪರ್ಧೆಯ, ಗ್ರಾಮಕಂಟಕರ ನಾಡಾಗಿ ಬಿಟ್ಟಿವೆ. ಅಂತೆಯೆ ಅವುಗಳಲ್ಲಿ ಜನತೆಯ ವಿಶ್ವಾಸ ಹಾರಿಹೋಗಿದೆ. ಗ್ರಾಮಪಂಚಾಯತಿಗಳು ಮೊದಲಿನಂತೆ ಕಾರ್ಯಕ್ಷಮವಾಗಬೇಕಾದರೆ ಯಶಸ್ವಿಯಾಗಿ ಆಡಳಿತವನ್ನು ಸಾಗಿಸಬೇಕಾದರೆ ಕಳೆದುಕೊಂಡ ವಿಶ್ವಾಸವನ್ನು ಮತ್ತೆ ಸಂಪಾದಿಸಬೇಕಾದರೆ ನಿಃಸ್ಪೃಹ, ನಿಃಸ್ವಾರ್ಥ ಮನೋವೃತ್ತಿಯ ಜನರು ಹಳ್ಳಿಗಳ ಸೇವೆಗೆ ಸನ್ನದ್ಧರಾಗಬೇಕು. ಇಂಥವರು ಗ್ರಾಮಪಂಚಾಯತಿಗಳಲ್ಲಿ ಕಾರ್ಯ ಮಾಡಲು ಮುಂದೆ ಬರಬೇಕು. ಇದನ್ನು ಮನಸಿನಲ್ಲಿಟ್ಟುಕೊಂಡೆ ಮುಂಬಯಿ ಸ್ಥಾನಿಕ ಸ್ವರಾಜ್ಯಮಂತ್ರಿಗಳು ಗ್ರಾಮಪಂಚಾಯತಿ ಕಾಯದೆಯಲ್ಲಿ ತಿದ್ದುಪಡಿಮಾಡಬೇಕು. ಅವುಗಳಿಗೆ ಹೆಚ್ಚಿನ ಹಣ ಅಧಿಕಾರ ಸಿಕ್ಕು ಅವುಗಳಿಂದ ಹಳ್ಳಿಗಳ ನಿಜವಾದ ಉದ್ಧಾರವಾಗುವಂತೆ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು.

## ಗೋಮಾಂತಕರ ಸ್ವಾತಂತ್ರ್ಯ

ಕಳೆದ ೪೦೦ ವರುಷಗಳಿಂದ ಪೋರ್ತುಗೀಜರ ಆಡಳಿತದಲ್ಲಿ ಸಿಕ್ಕು ನರಳುತಿರುವ ಗೋವೆಯ ಜನತೆಯಲ್ಲಿಂದು ಜಾಗ್ರತಿಯಾಗಿದೆ. ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆಯುವುದಕ್ಕಾಗಿ ನಾಗರಿಕ ಸ್ವಾತಂತ್ರ್ಯವನನ್ನನುಭವಿಸುವುದಕ್ಕಾಗಿ ಮುಂದಾಗಿದ್ದಾರೆ. ಇಷ್ಟು ದಿನಗಳವರೆಗೆ ಪೋರ್ತುಗೀಜರು ಅಲ್ಲಿ ಆಡಳಿತ ಸಾಗಿಸಿದರೂ ಅಲ್ಲಿ ಸಂಘಸ್ವಾತಂತ್ರ್ಯ ಸಭಾ ಸ್ವಾತಂತ್ರ್ಯವಿಲ್ಲ. ಹೊರಗಿನವರು ಹೋಗಿ ಭಾಷಣ ಮುಂತಾದ್ದನ್ನು ಮಾಡಲೆಳಸಿದರೆ ಅವರ ಮೇಲೆ ಬಗೆಬಗೆಯ ನಿರ್ಬಂಧ ಹೇರಲಾಗುತಿದೆ. ಡಾ. ರಾಮ ಮನೋಹರ ಲೋಹಿಯಾರವರು ಕೆಲ ದಿನಗಳ ಹಿಂದೆ ಅಲ್ಲಿಗೆ ಹೋದಾಗ ಭಾಷಣ ಮಾಡಬಾರದೆಂದು ಅವರ ಮೇಲೆ ನೋಟೀಸ ಪ್ರಯೋಗಿಸಿದರು. ಅದನ್ನು ಮುರಿದರೆಂದು ಅವರನ್ನು ಸೆರೆಹಿಡಿದು ಹಿಂದುಗಡೆ ಬಿಡಲಾಯಿತು. ಆದರೆ ಪೋರ್ತುಗೀಜ ಸರಕಾರದ ಈ ಬಗೆಯ ದಬ್ಬಾಳಿಕೆ ಇನ್ನು ಮುಂದೆ ನಡೆಯಲಾರದು. ನಾಗರಿಕ ಹಕ್ಕುಬಾಧ್ಯತೆಗಳನ್ನು ಅವರು ಜನತೆಗೆ ಕೊಡಲಿಕ್ಕೆ ಬೇಕು. ಮಹಾತ್ಮಾ ಗಾಂಧಿಯವರಾದರೂ ಈ ಸಂಬಂಧದಲ್ಲಿ ಬರೆಯುವಾಗ ಇಂಗ್ಲಿಶ್‌ರ ಬಲದ ಭರವಸೆಯ ಮೇಲೆ ಪೋರ್ತುಗೀಜರು ಇಂತು ಚಲ್ಲಾಟವಾಡಲಾರರೆಂದೂ ನಾಡಿನಲ್ಲಿ ಉಂಟಾದ ಜಾಗ್ರತೆಯನ್ನು ಕಂಡು ಜನತೆಗೆ ಹಕ್ಕುಬಾಧ್ಯತೆಗಳನ್ನು ಕೊಡಬೇಕೆಂದೂ ಕೇಳಿಕೊಂಡಿರುವರು. ಜನತೆಯಾದರೂ ಇದರಲ್ಲಿ ಯಾವದೇ ಬಗೆಯ ಜಾತಿ ಧರ್ಮದ ಪ್ರಶ್ನೆಗಳನ್ನು ಮುಂದೆ ತಾರದೆ ಎಲ್ಲರೂ ಒಕ್ಕಟ್ಟಿನಿಂದ ತಮ್ಮ ಹಕ್ಕುಬಾಧ್ಯತೆಗಳನ್ನು ಪಡೆಯಲು ಪ್ರಯತ್ನಿಸಬೇಕು. ಮಹಾತ್ಮರೂ ಇದೇ ಬಗೆಯ ಸಲಹೆಯನ್ನು ಕೊಟ್ಟಿರುವರು. ಗೋವೆಯಲ್ಲಿಯ ತರುಣರು ಈ ಪ್ರಯತ್ನದಲ್ಲಿ ಮುಂದಾದುದು ಅಭಿನಂದನೀಯವಾಗಿದೆ. ಹಿರಿಯರು ಅದರನ್ನು ಹಿಂದಕ್ಕೆ ಜಗ್ಗದೆ ಸರ್ವರೀತಿಯಿಂದ ಅವರಿಗೆ ನೆರವಾಗಿ ನಾಗರಿಕ ಸ್ವಾತಂತ್ರ್ಯ ಪಡೆಯಬೇಕೆಂದು ಸೂಚಿಸಬಯಸುತ್ತೇವೆ.

## ಮತ್ತೊಂದು ಯುದ್ಧದ ಸಿದ್ಧತೆ

ಅಮೇರಿಕನ್‌ರು ಕಳೆದವಾರ ಶಾಂತಸಾಗರದ ಬಿಕಿನಿಯಲ್ಲಿ ಅಟಂಬಾಂಬಿನ ಪ್ರಯೋಗ ನಡೆಸಿದ್ದ ಸುದ್ದಿಯನ್ನು ಇದೇ ಸಂಚಿಕೆಯಲ್ಲಿ ಬೇರೆಡೆ ಕೊಟ್ಟಿದ್ದೇವೆ. ಜಪಾನವನ್ನು ಸೋಲಿಸುವದಕ್ಕಾಗಿ ಅಮೇರಿಕನ್‌ರು ಈ ಬಾಂಬಿನ ಪ್ರಯೋಗ ಮಾಡಿದ್ದು ಸರ್ವಶ್ರುತ. ಅದರೀಗ ಶಾಂತಕಾಲದಲ್ಲಿಯೂ ಅದರ ಪ್ರಯೋಗಮಾಡಿ ತೋರಿಸಿ ತಮ್ಮಲ್ಲಿ ಎಂಥ ಅಪರಿಮಿತ ಶಕ್ತಿಸಾಧನವಿದೆಂಬುದನ್ನು ಜಗತ್ತಿನಲ್ಲಿ ಸಾರುವುದೆ ಇದರ ಉದ್ದೇಶವಿರಬಹುದು. ಪಂಡಿತ ಜವಾಹರಲಾಲರು ಈ ಸಂಬಂಧದಲ್ಲಿ ಲೇಖ ಬರೆಯುತ್ತ ಅಟಂಬಾಂಬ ಪ್ರಯೋಗವು ಮೂರನೆ ಮಹಾಯುದ್ಧದ ಸಿದ್ಧತೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಪ್ರಪಂಚಕ್ಕೇ ಇದೊಂದು ಬಗೆಯ ಆಹ್ವಾನ ಹಾಗು ಬೆದರಿಕೆಯೆಂದೂ ಅಮೇರಿಕೆಯ ಮಾರ್ಗದಲ್ಲಿ ಅಡ್ಡಬರುವವರನ್ನು ಈ ಬಾಂಬಿನಿಂದ ಹುಡರಿಸಿ ಚೆಲ್ಲುವೆವೆಂದು ಜಗತ್ತಿನಲ್ಲಿ ಡಂಗುರ ಸಾರುವುದಕ್ಕಲ್ಲದೆ ಮತ್ತೇನು? ಎಂದು ಅವರು ಕೇಳಿರುವರು. ಯುಕ್ತರಾಷ್ಟ್ರಸಂಘದವರು ಶಾಂತಿಯ ಮಾತುಗಳನ್ನು ನಡೆಸಿರುವಾಗಲೆ ವಿನಾಶಕಾರಿಯಾದ ಅಟಂಬಾಂಬಿನ ಪ್ರಯೋಗ ನಡೆಸುವುದು ಏತರ ದ್ಯೋತಕವು? ಶಾಂತಿಯಲ್ಲಿ ಯುಕ್ತರಾಷ್ಟ್ರಗಳ ವಿಶ್ವಾಸವಿಲ್ಲೆಂಬುದರ ನಿದರ್ಶನವಿದಲ್ಲವೆ? ಪರರ ಮೇಲೆ ಸತ್ತೆ ನಡೆಸಬಯಸುವ ಅಮೇರಿಕೆಯಂಥ ರಾಷ್ಟ್ರಗಳು ಇಂಥ ವಿನಾಶಕಾರಿ ಅಸ್ತ್ರಗಳ ಪ್ರಯೋಗ ಮಾಡಿ ದುರ್ಬಲರಾಷ್ಟ್ರಗಳನ್ನು ಹೆದರಿಸುತಿರುವರು. ಕೇವಲ ತಮ್ಮ ಶಕ್ತಿಯ ಪ್ರಯೋಗ ಮಾಡಿತೋರುವದಕ್ಕಾಗಿ ಇಷ್ಟೊಂದು ಧನ-ಸಾಮುಗ್ರಿಗಳ ನಾಶಮಾಡುವದೇಕೊ ಜಗತ್ತಿನಲ್ಲಿ ಶಾಂತಿಸುಖಸಮೃದ್ಧಿಗಳನ್ನುಂಟುಮಾಡಬೇಕೆಂಬದನ್ನು ಪ್ರಬಲರಾಷ್ಟ್ರಗಳು ಧ್ಯೇಯವನ್ನಾಗಿಟ್ಟುಕೊಳ್ಳಬೇಕು. ಇದನ್ನು ಬಿಟ್ಟುಗೊಟ್ಟು ಅಟಂಬಾಂಬಿನಂಥ ಹಿಂಸಾತ್ಮಕ ವಿನಾಶಕಾರಿ ಅಸ್ತ್ರಗಳನ್ನುಪಯೋಗಿಸುವುದು ಯಾವ ರೀತಿಯಿಂದಲೂ ನ್ಯಾಯ್ಯ ಮತ್ತು ಇಷ್ಟವಾಗಲಾರದು.

## ಲುಯಿ ಫಿಶರರು

ಅಮೇರಿಕೆಯ ಪ್ರಸಿದ್ಧ ಲೇಖಕರಾದ ಲುಯಿ ಫಿಶರರು ಐದುವಾರಗಳ ವರೆಗೆ ಹಿಂದುಸ್ತಾನದಲ್ಲಿರಬಯಿಸಿ ಬಂದಿರುವರು. ಅವರೀಗ ಪುಣೆಯಲ್ಲಿ ಮಹಾತ್ಮರ ಬಿಡಾರವಿರುವ ನೈಸರ್ಗಿಕ ಚಿಕಿತ್ಸಾಲಯದಲ್ಲಿರುತಿರುವರು ಹೊಸದಿಲ್ಲಿಯಲ್ಲಿ ಅವರು ಸುದ್ದಿಗಾರರೊಡನೆ ಮಾತಾಡುವಾಗ ಹಿಂದುಸ್ತಾನಕ್ಕೆ ಬ್ರಿಟಿಶರು ಸ್ವಾತಂತ್ರ್ಯವನ್ನು ಕೊಡಮಾಡಿದ್ದು ಹೃದಯ ಪರಿವರ್ತನೆಯಿಂದಲ್ಲ, ಆದರೆ ರಶಿಯದ ಹೆದರಿಕೆಯಿಂದ ಎಂಬುದಾಗಿ ಹೇಳಿದರು. ಇಡೀ ಜಗತ್ತಿನ ವಿದ್ಯಮಾನಗಳೆ ಅನುಕೂಲವಾಗಿದ್ದು ಹಿಂದುಸ್ತಾನಕ್ಕೆ ಕೂಡಲೆ ಸ್ವಾತಂತ್ರ್ಯ ಸಿಕ್ಕುವುದು. ಹಿಂದೀಯರು ಕೂಡ ಅದನ್ನು ತಡೆಗಟ್ಟಲಾರರು. ಎಂದು ಅವರು ಅಭಿಪ್ರಾಯಪಟ್ಟರು. ಇಂಗ್ಲಂಡ ಮತ್ತು ರಶಿಯದ ರಾಜಕೀಯ ಗುರಿಗಳು ತೀರ ಭಿನ್ನವಾಗಿವೆ. ಇಂಗ್ಲಂಡು ಅಮೇರಿಕೆಯ ಹಣದ ಸ್ಪರ್ಧೆಯನ್ನು ಎದುರಿಸಬೇಕಾಗಿದೆ. ಈ ಬಲವೂ ಅದರಲ್ಲಿಲ್ಲ. ಹೀಗೆ ಹಿಂದುಸ್ತಾನದಲ್ಲಿ ಉಳಿಯುವದು ಇಂಗ್ಲಂಡಿಗೆ ಅಶಕ್ಯವಾಗಿದೆ. ಇದನ್ನು ಅವರು ಕಂಡುಹಿಡಿದಿರುವರು. ಮುತ್ಸದ್ದಿಗಳು ಅವರಿದ್ದುದರಿಂದ ಹೊರಗೆ ಹಾಕಿಸಿಕೊಳ್ಳುವ ಮೊದಲು ತಾವೇ ಹೊರಟು ಹೋಗಬೇಕೆಂದು ಮಾಡಿರುವರು ಎಂದು ಮುಂತಾಗಿ ಫಿಶರರು ಹಿಂದೀ ಸಮಸ್ಯೆಯ ಬಗ್ಗೆ ಹೇಳಿದರು. ಈ ರೀತಿ ಹಿಂದುಸ್ತಾನಕ್ಕೆ ಅನುಕೂಲ ಪರಿಸ್ಥಿತಿಯಿರುವಾಗ ಮುಸ್ಲಿಂ ಲೀಗಿನವರು ನಿರರ್ಥಕವಾಗಿ ಹಟಮಾರಿತನದ ಧೋರಣ ಸ್ವೀಕರಿಸಿ ನಡುಗಾಲ ಸರಕಾರದ ಯೋಜನೆ ಕಾರ್ಯಕಾರಿಯಾಗದಂತೆ ಯೋಜಿಸಿದರು. ತತ್ಪರಿಣಾಮವಾಗಿ ಹಿಂದುಸ್ತಾನದಲ್ಲಿ ಆಯ. ಸಿ. ಎಸ್. ಅಧಿಕಾರಿಗಳ ಆಡಳಿತ ಪ್ರಾರಂಭವಾಯಿತು. ಇದೆಲ್ಲವನ್ನರಿತಾದರೂ ಮುಸ್ಲಿಂ ಲೀಗಿನವರು ಅಖಂಡ ಹಿಂದುಸ್ತಾನದ ಹಿತಕ್ಕಾಗಿ ಹಿಂದು—ಶೀಖ ಮೊದಲಾದ ಎಲ್ಲ ಜಾತಿಯವರನ್ನು ಕೂಡಿಕೊಂಡು ನಡೆಯುವ ಧೋರಣ ವಹಿಸಬೇಕು.

## ಬಿಳಿಯರ ವರ್ಣದ್ವೇಷ

ದಕ್ಷಿಣ ಅಫ್ರಿಕೆಯಲ್ಲಿ ವರ್ಣದ್ವೇಷದಿಂದ ತುಂಬಿ ತುಳುಕುತಿರುವ ಘೆಟ್ಟೊ ಶಾಸನದ ವಿರುದ್ಧ ಭಾರತೀಯರು ನಡೆಸಿದ ಸತ್ಯಾಗ್ರಹವನ್ನೆ ದುರಿಸಲಾರದೆ ಅಲ್ಲಿನ ಬಿಳಿಯರು ಸತ್ಯಾಗ್ರಹಿಗಳ ಬೀಡುಗಳನ್ನು ಮುತ್ತಿ ಅಸ್ತಿ ಮುಂತಾದ್ದನ್ನು ನಾಶಮಾಡುತಿರುವುದು ಸ್ತ್ರೀಯರ ಮಾನಭಂಗ ಮಾಡುತಿರುವುದು ಅತ್ಯಂತ ನಿಂದ್ಯವಾದುದು. ಅಲ್ಲಿನ ಹಿಂದೀ ಮುಖಂಡರನ್ನು ಸೆರೆ ಹಿಡಿದು ಶಿಕ್ಷೆ ವಿಧಿಸಿದಂದಿನಿಂದ ಹಿಂದೀ ಸ್ತ್ರೀ ಪುರುಷರಲ್ಲಿ ಅಪೂರ್ವ ಜಾಗೃತಿಯಾಗಿ ಸತ್ಯಾಗ್ರಹಕ್ಕಾಗಿ ಅವರೊಳೆ ಧೈರ್ಯದಿಂದ ಮುಂದೆ ಬರುತಿರುವರು. ಇದನ್ನು ತಡೆಯುವುದಕ್ಕಾಗಿ ಬಿಳಿಯರು ಬಗೆ ಬಗೆಯ ಪುಂಡಾಟಿಕೆಯನ್ನು ನಡೆಸಿರುವರು. ಇದನು ನಿಲ್ಲಿಸಿ ಜನತೆಗೆ ಶಾಂತಿಯ ಅಭಯ ಹಸ್ತವನ್ನು ಕೊಡುವುದು ಸರಕಾರದ ಕರ್ತವ್ಯವಾಗಿದೆ. ಆದರೆ ಬಿಳಿಯರಿಂದಲೆ ತುಂಬಿದ ಆ ಸರಕಾರ ಅದೆಂತು ನ್ಯಾಯ್ಯವನ್ನು ತೋರಿಸಬಲ್ಲದು? ಇಷ್ಟೊಂದು ಹಿಂಸೆಗೆ ಆಹುತಿಯಾಗಿದ್ದರೂ ಅಲ್ಲಿನ ಸತ್ಯಾಗ್ರಹಿಗಳು ಸ್ವಲವೂ ಬೆದರದೆ ಅಭಿನಂದನೀಯ ರೀತಿಯಿಂದ ಸತ್ಯಾಗ್ರಹವನ್ನು ಸಾಗಿಸಿದ್ದಾರೆ. ಇಡೀ ಪ್ರಪಂಚದಲ್ಲಿಯೆ ಈ ಸತ್ಯಾಗ್ರಹವು ಸುಪ್ರಸಿದ್ಧವಾಗುವದು. ಪಶುವೃತ್ತಿಯ ಬಲುಮೆಯಲ್ಲಿ ವಿಶ್ವಾಸವಿದ್ದ ಪ್ರಬಲ ರಾಷ್ಟ್ರಗಳಿಗೆ ಅಹಿಂಸೆ ಸತ್ಯಾಗ್ರಹಗಳ ಪಾಠನ್ನು ಕಲಿಸಿದಂತಾಗುತ್ತದೆ. ಶಾಂತಿ ಮಂತ್ರವನ್ನು ಬಾಯಿಂದ ಜಪಿಸುತ್ತ ಕೂಡುವದಕ್ಕಿಂತ ಪ್ರಸಂಗ ಬಂದಾಗ ಕೃತಿಯಲ್ಲಿಳಿಸುವುದೆ ನಿಜವಾದ ಸತ್ಯಾಗ್ರಹಿಯ ಕರ್ತವ್ಯ. ವಿಶ್ವಶಾಂತಿಯ ಜಂಭ ಕೊಚ್ಚಿಕೊಳ್ಳುತಿರುವ ಪ್ರಬಲ ರಾಷ್ಟ್ರಗಳು ಸತ್ಯಾಗ್ರಹಿಗಳ ಈ ಛಲವನ್ನಿ, ಹಿಂಸೆಯನ್ನು ಸ್ವಸ್ಥ ನೋಡುತ್ತ ಕೂಡ್ರದೆ ಅದನ್ನು ಕೂಡಲೆ ನಿಲ್ಲಿಸಬೇಕು. ಸತ್ಯಾಗ್ರಹಿಗಳಾದರೂ ಹಿಂಸೆಗೆ ಸ್ವಲ್ಪವೂ ಎಳಸದೆ ವಿಶುದ್ಧ ಅಹಿಂಸಾಮಾರ್ಗದಿಂದಲೆ ಸತ್ಯಾಗ್ರಹ ಸಾಗಿಸಿ ವಿಜಯ ಪಡೆಯಬೇಕೆಂದು ಹಾರೈಸುತ್ತೇವೆ.

## ಹಿಂದೀ ವಲಸೆ ಮಸೂದೆ

ಹಿಂದೀ ವಲಸೆ ಮಸೂದೆಗೆ ಅಮೇರಿಕೆಯ ಅಧ್ಯಕ್ಷ ಟ್ರೂಮನ್‌ರು ಸಹಿ ಮಾಡಿ ಬಹಳ ದಿನಗಳಿಂದ ಹಿಂದೀಯರಿಗೆ ದೊರೆಯಬೇಕಾಗಿದ್ದ ನ್ಯಾಯ್ಯವನ್ನು ದಯಪಾಲಿಸಿದ ಶ್ರೇಯಸ್ಸು ಪಡೆದುಕೊಂಡರು. ಈ ಮಸೂದೆಯನ್ವಯ ಪೂರ್ವರಾಷ್ಟ್ರಗಳಲ್ಲಿರುವ ೭೫ ಹಿಂದೀಯರು ಪ್ರತಿ ವರ್ಷ ಅಮೇರಿಕೆಗೆ ಬಂದು ಅಲ್ಲಿನ ನಾಗರಿಕತ್ವದ ಹಕ್ಕನ್ನು ಸಂಪಾದಿಸಬಲ್ಲರು. ಈಗಾಗಲೆ ಅಮೇರಿಕೆಯಲ್ಲಿದ್ದ ೩೦೦೦ ಹಿಂದೀಯರು ಅಮೇರಿಕೆಯ ನಾಗರಿಕರೆಂದು ಎಲ್ಲಬಗೆಯ ಹಕ್ಕುಬಾಧ್ಯತೆ ಪಡೆವರು. ಈ ಮಹತ್ವದ ಮಸೂದೆಗೆ ಅಧ್ಯಕ್ಷರು ಸಹಿ ಮಾಡುವಾಗ ಇದರ ಪ್ರವರ್ತಕರಾದ ಸಿನೇಟರ ಸೆಲರರು ಅವರ ಬಳಿಯಲ್ಲಿಯೆ ಇದ್ದರು. ಹಿಂದೀಯರು ಯುದ್ಧದಲ್ಲಿ ನಮ್ಮ ಹೆಗಲಿಗೆ ಹೆಗಲುಹಚ್ಚಿ ಹೋರಾಡಿರುವರು. ಶಾಂತಿಕಾಲದಲ್ಲಿ ಅವರನ್ನು ಬೇರೆ ರೀತಿಯಾಗಿ ಭಾವಿಸುವದು ಸರಿಯಾಗಲಾರದು. ಈ ಮಸೂದೆ ಸ್ವೀಕೃತವಾದ್ದರಿಂದ ಇನ್ನು ಇವೆರಡೂ ರಾಷ್ಟ್ರಗಳ ಸ್ನೇಹ ಸೌಹಾರ್ದ ಮತ್ತಷ್ಟು ಬೆಳೆಯಲಿ ಎಂದು ಮುಂತಾಗಿ ಸಿನೇಟರ ಸೆಲರರು ಹಿಂದುಗಡೆ ಹೇಳಿದರು. ಹಿಂದೀಯರಿಗೆ ನಾಗರಿಕತ್ವದ ಹಕ್ಕುಗಳನ್ನು ಅಮೇರಿಕನ್‌ರು ಕೊಡುತ್ತಿರುವಾಗ ಅದಕ್ಕೆ ಅತಿದಾಳ ಬಡೆದು ಅವರನ್ನು ಅನನ್ಯರೀತಿಯಿಂದ ಛಳಿಸುತಿರುವ ಅಫ್ರಿಕೆಯ ಬಿಳಿಯರು ಎಷ್ಟೊಂದು ನಿಂದ್ಯಕೃತಿಯನ್ನು ಮಾಡುತಿರುವರೆಂಬುದು ಸ್ಪಷ್ಟವಿದೆ. ಅಮೇರಿಕನ್‌ರ ಈ ಮಾದರಿಯನ್ನಾದರೂ ತಿಳಿದು ಅಫ್ರಿಕನ್ನರು ತಮ್ಮ ಧೋರಣ ಬದಲಿಸುವರೇ ?

# ಆಯ. ಸಿ. ಎಸ್. ಮಯ 'ಜೋಪಾಸನ ಸರಕಾರ'ದಲ್ಲಿ ಹಿಂದೀಯರಿಗೆ ಎರಡೇ ಸ್ಥಾನ! —

## ವಾಯಿಸರಾಯರು ಒಬ್ಬೊಬ್ಬರಿಗೊಂದೊಂದು ಮಾತು ಕೊಟ್ಟಿದ್ದರು— ಪತ್ರವ್ಯವಹಾರಗಳ ಪ್ರಕಟನೆ—ಕಾಂಗ್ರೆಸ್ಸಿನ ಮೇಲೆ ಜಿನ್ನಾರ ಫೂತ್ಕಾರ

ವಾಯಿಸರಾಯರು ನಡುಗಾಲ ಸರಕಾರದ ಯೋಜನೆಯನ್ನು ತೆಗೆದೊಗೆದು "ಜೋಪಾಸನ ಸರಕಾರ" ಸ್ಥಾಪಿಸುವ ನಿರ್ಣಯವನ್ನು ಹೊರಪಡಿಸಿದ ನಂತರ ಹಿಂದುಸ್ತಾನದ ರಾಜಕೀಯ ವಾತಾವರಣದಲ್ಲಿ ಮತ್ತೆ ಮಾಂದ್ಯ ಕಾಲಿಟ್ಟಿದೆ. ಅಹಮದಾಬಾದ, ಡಾಕಾ ಮೊದಲಾದೆಡೆಗಳಲ್ಲಿ ಜಾತೀಯ ಗಲಭೆಗಳು, ಗಾಂಧೀಜಿಯ ಗಾಡಿಯನ್ನುರುಳಿಸುವ ಪ್ರಯತ್ನ ಮೊದಲಾದ ಕಿರುಕಳ ಕಿಡಿಗೇಡಿತನಗಳನ್ನು ಬಿಟ್ಟರೆ ಮಹತ್ವದ ಸಂಗತಿಗಳಾವವೂ ಜರಗಿಲ್ಲವೆನ್ನಬೇಕು. ಭಾರತ ಮಂತ್ರಿಗಳೂ ಅವರ ಸಹಯೋಗಿಗಳೂ ಮೊದಲೇ ನಿಶ್ಚಯವಾದಂತೆ ಶನಿವಾರ (ತಾ ೨೯) ಕರಾಚಿ ವಿಮಾನ ನಿಲ್ದಾಣದಿಂದ ಇಂಗ್ಲಂಡಿಗೆ ಪಯಣ ಬೆಳಿಸಿದರು. ಸರ್ ಸ್ಟಾಫರ್ಡರು ೪ ವರ್ಷ ಕೆಳಗೆ ಬಿಕ್ಕಟ್ಟು ಬಿಡಿಸಬಾರದೆ ಇದೇ ನಿಲ್ದಾಣದಿಂದ ಹೊರಟು ಹೋಗುತ್ತ ಹೇಳಿದ ದುರ್ದೈವಿ ಹೇಳಿಕೆಗೂ "ಕಾಂಗ್ರೆಸ್ಸು ಎಲ್ಲ ಬೇಕು ಇಲ್ಲವೆ ಏನೂ ಬೇಡವೆಂದಿತು. ಅದಕ್ಕೆ ಏನೂ ಸಿಗಲಿಲ್ಲ!" ಎಂದು ಆಗ ಅವರು ಹೇಳಿದ್ದರು.) ಈ ಬಾರಿ ಅವರಂದ ಮಾತುಗಳಿಗೂ ಬಹಳ ಅಂತರವಿತ್ತು. "ನಾವು ಪ್ರಾರಂಭವಂತೂ ಮಾಡಿರುವೆವು. ಅದರ ಲಾಭ ಪಡೆದುಕೊಳ್ಳುವದು ನಿಮ್ಮನ್ನೇ ಕೂಡಿದೆ," ಎಂದು ಅವರು ಹೇಳಿದರು. ಇಂಗ್ಲಂಡಿಗೆ ಮರಳಿದ ನಂತರ ಮಂತ್ರಿತ್ರಯರು ಕೊಟ್ಟ ಹೇಳಿಕೆಯಲ್ಲಿಯೂ "ನಮ್ಮ ರಾಯಭಾರದ ಮುಖ್ಯೋದ್ದೇಶ ಫಲಿಸಿದೆ" ಎಂದು ಹೇಳಿ ನಡುಗಾಲ ಸರಕಾರದ ಬಗ್ಗೆ ಇನ್ನೂ ಸಾತ್ವಿಕ ಆಶಯವನ್ನು ವ್ಯಕ್ತಗೊಳಿಸಿದ್ದಾರೆ.

### ವಾಯಿಸರಾಯರ ಕಾರ್ಯಾರಂಭ

ಜೋಪಾಸನ ಸರಕಾರವನ್ನು ಸ್ಥಾಪಿಸುವ ನಿಶ್ಚಯದ ಬೆನ್ನಿಗೇ ವಾಯಿಸರಾಯರು ಶನಿವಾರ (೨೯) ಆ ಸರಕಾರದ ಮಂತ್ರಿಗಳ ಹೆಸರುಗಳನ್ನೂ ಬಹಿರಂಗಗೊಳಿಸಿದ್ದಾರೆ. ೮ ಜನರನ್ನೊಳಗೊಂಡ ಈ ಮಂತ್ರಿಮಂಡಲದಲ್ಲಿ ಇಬ್ಬರೇ ಹಿಂದೀಯರಿರುವದನ್ನು ನೋಡಿ ರಾಜಕೀಯ ವರ್ಗಗಳು ಆಶ್ಚರ್ಯಗೊಂಡಿವೆ. ಈ ಮಂತ್ರಿಗಳು ಕೆಳಗಿನವರು:

೧ ಸರ್ ಕ್ಲಾಡ್ ಅಚಿನಲೆಕ— ಯುದ್ಧ
೨ ಸರ್ ಗುರುನಾಥ ಬೇವೂರ— ವಾಣಿಜ್ಯ ಮತ್ತು ವಲಸೆ
೩ ಸರ್ ಎರಿಕ್ ಕೋಟ್ಸ— ಹಣಕಾಸು
೪ ಸರ್ ಎರಿಕ್ ಕೊನ್ರಾನ ಸ್ಮಿಥ— ಸಾರಿಗೆ, ರೇಲ್ವೆ, ಅಂಚೆ
೫ ಸರ್ ರಾಬರ್ಟ ಹಚಿನ್ಸ— ಆಹಾರ, ಒಕ್ಕಲತನ
೬ ಸರ್ ಅಕ್ಬರ ಹೈದರಿ— ಕೂಲಿಕಾರ, ಆರೋಗ್ಯ, ಗಣಿ, ಸುದ್ದಿ
೭ ಸರ್ ಜಾರ್ಜ ಸ್ಪೆನ್ಸ— ಕಾಯದೆ, ಶಿಕ್ಷಣ.
೮ ಎ. ಎ. ವಾಘ— ಗೃಹ, ಔದ್ಯೋಗಿಕ, ಪೂರೈಕೆ

ಇದರಿಂದ ವಾಯಿಸರಾಯರು ಬಲಗಾಲು ಮುಂದಿಟ್ಟು ಕಾರ್ಯ ಪ್ರವೇಶ ಮಾಡಿದಂತಾಗಲಿಲ್ಲವೆಂಬುದು ನಿಶ್ಚಯ. ಅಚಿನಲೆಕ, ವಾಘ, ಹೈದರಿ ಇವರನ್ನು ಬಿಟ್ಟು ಉಳಿದವರೆಲ್ಲರೂ ಆಯ. ಸಿ. ಎಸ್. ಅಧಿಕಾರಿಗಳೆಂಬುದನ್ನು ಬಿಟ್ಟರೂ ಹಿರಿಯ ಹಿಂದೀ ಅಧಿಕಾರಿಗಳ ತಲೆಯ ಮೇಲಿಂದ ಕಿರಿಯ ಬಿಳಿ ಅಧಿಕಾರಿಗಳನ್ನೆತ್ತಿ ಗಾದಿಯಲ್ಲಿ ಕೂಡಿಸಿದ್ದಾರೆಂಬ ಗುಣುಗುಣು ಎದ್ದಿದೆ. ಸಾಲದ್ದಕ್ಕೆ ಮಿ. ಕೋಟ್ಸರು ಬಹಳ ಪ್ರತಿಗಾಮಿಗಳೂ ಸೂತ್ರಚಾಲಕ ಬುದ್ಧಿಯವರೂ ಹಿಂದೀ ವಿರೋಧಿಗಳೂ ಇರುವರೆಂದು ಹೇಳಲಾಗುತ್ತದೆ. ಆದರೆ ಹಿಂದೂ—ಮುಸ್ಲಿಂ ಸಮಪ್ರಾತಿನಿಧ್ಯವನ್ನು ಸಾಧಿಸುವ ಗೋಸುಗ ಬಿಳಿಯರಿಗೆ ಈ ಅಧಿಕಾರಗಳನ್ನು ಕೊಟ್ಟಿರಬಹುದೇನೊ! ಏಕೆಂದರೆ ಸೆಕ್ರೆಟೇರಿಯಟ್ಟನಲ್ಲಿ ಮುಸ್ಲಿಂ ಹಿರಿಯ ಆಯ. ಸಿ. ಎಸ್.ಗಳು ಇದ್ದಿಲ್ಲ!

ಘಟನಾ ಸಮಿತಿಯ ಬಗ್ಗೆಯೂ ವಾಯಿಸರಾಯರು ಈಗಾಗಲೆ ಕಾರ್ಯಾರಂಭ ಮಾಡಿಬಿಟ್ಟಿದ್ದಾರೆ. ಚುನಾವಣೆಗಳು ಜುಲೈ ಅಂತ್ಯದೊಳಗೆ ಮುಗಿದು ಹೋಗಬಹುದು. ಅದ್ದರಿಂದ ವೈಸರಾಯರು ಅದರ ವ್ಯವಸ್ಥೆಗಳನ್ನು ಮಾಡಲು ಸೆಕ್ರೆಟೇರಿಯಟ್ಟಿಗೆ ಅಜ್ಞೆ ಕೊಟ್ಟಿರುವರು. ಇಷ್ಟೇ ಅಲ್ಲ, ಸರ್. ಬಿ. ಎನ್. ರಾಯರನ್ನು ಘಟನಾ ಸಮಿತಿಯ ಸಭೆಗಳನ್ನು ಕೂಡಿಸುವ ಕೆಲಸಕ್ಕಾಗಿ ಘಟನಾ ಸಲಹೆಗಾರರಾಗಿ ನೇಮಿಸಲಾಗಿದೆ. ಈ ನೇಮಕಕ್ಕೆ ಘಟನಾ ಸಮಿತಿಯ ಅಂಗೀಕಾರ ದೊರೆಯಬೇಕಾಗುವದು. ಅದು ದೊರೆಯುವದೆಂದು ವಾಯಿಸರಾಯರು ಆಶಿಸಿದ್ದಾರೆ. ಸರ್ ರಾಯರು ಈ ಕೆಲಸಕ್ಕಾಗಿ ಯಾವ ಪ್ರತಿಫಲವನ್ನು ತೆಗೆದುಕೊಳ್ಳುವದಿಲ್ಲವಾಗಿ ಹೇಳಿದ್ದಾರೆ.

### ಜಿನ್ನಾರ ಸಿಟ್ಟು

ಈ ಎಲ್ಲ ಸ್ಥಿತ್ಯಂತರಗಳಿಂದ ಎಲ್ಲರಿಗಿಂತ ಹೆಚ್ಚು ದುಃಖಿತರಾದವರು ಜಿನ್ನಾ ಸಾಹೇಬರೇ ಸರಿ. ಅವರು ನಡುಗಾಲ ಸರಕಾರದ ಯೋಜನೆಯನ್ನು ಸ್ವೀಕರಿಸಿದರೂ ಕಾಂಗ್ರೆಸ್ಸಿನ ನಿರಾಕರಣೆಯ ಕಾರಣದಿಂದ ಇಡಿ ಯೋಜನೆಯನ್ನು— ಅದೂ ಜಿನ್ನಾರು ಮೊದಲೆ ಧೈರ್ಯ ಕೊಟ್ಟಿದ್ದರೂ— ಕಸದ ಬುಟ್ಟಿಗೊಗೆದದ್ದರಿಂದ "ಮುಸ್ಲಿಂ ರಾಷ್ಟ್ರದ' 'ದೃಷ್ಟಿಯಲ್ಲಿ ಅವರ ಮಹಿಮೆಯನ್ನು ಬಹಳ ಮಟ್ಟಿಗೆ ಇಳಿಸಿದಂತಾಯಿತು. ಈಗಾಗಲೆ ಸಿಂಧದ ಬಂಡುಗಾರ ಲೀಗವಾಲರಾದ ಜಿ. ಎಂ. ಸೈಯದರು ಜಿನ್ನಾರ ಮತ್ತು ಅವರ ಕಾರ್ಯಕಾರಿ ಮಂಡಲದ ಧೋರಣೆಯ ಫಲವಾಗಿ ಈಗೆಂಟು ವರ್ಷಗಳಿಂದ ಹಿಂದುಸ್ತಾನದ ಮುಸ್ಲಿಮರು ಗಳಿಸಿದ್ದನ್ನೆಲ್ಲ ಈಗ ಕಳೆದುಕೊಂಡಿದ್ದಾರೆಂದೂ ಮುಸ್ಲಿಮರ ಪಕ್ಷ ಪ್ರತಿಪಾದನೆ ಇಂದು ಅತ್ಯಂತ ವಿಘಟಿತ ಅವಸ್ಥೆಯಲ್ಲಿದೆಯೆಂದೂ ಹೇಳಿ ಲೀಗ ವರಿಷ್ಠರು ರಾಜಿನಾಮೆ ಕೊಡಬೇಕೆಂದು ಆಹ್ವಾನವಿತ್ತಿದ್ದಾರೆ. ಅದಕ್ಕಿಂತಲೂ ಕೆಟ್ಟದ್ದೆಂದರೆ, ಸಯ್ಯದರು, ಮಾತುಕತೆಗಳ ಕಾಲದಲ್ಲಿ ತಮ್ಮ ತತ್ವಗಳ ವಿಷಯದಲ್ಲಿ ಜಿನ್ನಾರು ತೋರಿಸಿದ ಗಾಳಿಕೋಳಿತನವನ್ನೂ ಕಾಂಗ್ರೆಸ್ಸು ತನ್ನ ತತ್ವಗಳ ವಿಷಯದಲ್ಲಿ ತೋರಿದ ದಾರ್ಢ್ಯವನ್ನೂ ಹೋಲಿಸಿ ಜಿನ್ನಾರನ್ನು ಹೀಗಳೆದಿದ್ದಾರೆ. ಇದರಿಂದ ಜಿನ್ನಾರವರು ಉದ್ದಂಡ ಕೋಪಕ್ಕೆ ಒಳಗಾಗಿದ್ದಾರೆ. ಅವರು ತಾ ೨೭ಕ್ಕೆ ಹೊರಡಿಸಿದ ಹೇಳಿಕೆಯೊಂದರಲ್ಲಿ ನಡುಗಾಲ ಸರಕಾರ ಯೋಜನೆಯನ್ನು ಬಿಟ್ಟುಕೊಟ್ಟದ್ದರಿಂದ ಜೂನ ೧೬ ರ ಹೇಳಿಕೆಯಲ್ಲಿ ವಾಯಿಸರಾಯರು ಮಾಡಿದ ವಾಗ್ದಾನವನ್ನು ಮುರಿದಂತಾಗಿದೆಯೆಂದೂ ಕಾಂಗ್ರೆಸ್ಸು ಅದನ್ನು ಸ್ವೀಕರಿಸದಿದ್ದರೂ ಲೀಗದ ಸಹಕಾರದಿಂದ ಯೋಜನೆಯನ್ನು ಕೃತಿಗೆ ಇಳಿಸಬೇಕಾಗಿತ್ತೆಂದೂ ಹೇಳಿದ್ದಾರೆ. ದೀರ್ಘವಾದ ಆ ಹೇಳಿಕೆಯಲ್ಲಿ ಅವರು ತಮಗೂ—ವಾಯಿಸರಾಯರಿಗೂ ಆದ ಪತ್ರವ್ಯವಹಾರದ ಅನೇಕ ಭಾಗಗಳ ಅವತರಣಿಕೆಯೆತ್ತಿ ಕೊಟ್ಟಿದ್ದಾರೆ. ಅದರಿಂದ ಮೇ ೧೬ಕ್ಕೆ ಮೊದಲೇ ವಾಯಿಸರಾಯರು ಸಿಮಲೆಯಲ್ಲಿ ೫ ಲೀಗ ೫ ಕಾಂಗ್ರೆಸ ೧ ಸೀಖ ಮತ್ತು ಇನ್ನೊಂದು ಹಿಂದೀ ಕ್ರಿಶ್ಚನ್ ಅಥವಾ ಅಂಗ್ಲೋ ಇಂಡಿಯನ್ ಸ್ಥಾನಗಳನ್ನೊಳಗೊಂಡ ನಡುಗಾಲ ಸರಕಾರ ಸ್ಥಾಪನೆಯಾಗುವದೆಂದು ಜಿನ್ನಾರಿಗೆ ವಾಗ್ದಾನ ಕೊಟ್ಟದ್ದರೆಂದು ಗೊತ್ತಾಗುತ್ತದೆ. ಈ ವಿಷಯವನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಲೀಗ ಕಾರ್ಯಸಮಿತಿ ಜೂನ ೬ ಕ್ಕೆ ದೀರ್ಘಾವಧಿ ಯೋಜನೆಯನ್ನು ಒಪ್ಪಿಕೊಂಡಿತೆಂದೂ ಜಿನ್ನಾರ ಅಂಬೋಣ. ಆ ಮೇಲೆ "ಕಾಂಗ್ರೆಸ ಪತ್ರಿಕೆಗಳು ತೇಲಿಬಿಟ್ಟ ಚಳವಳಿಯ ಫಲವಾಗಿ" ವಾಯಿಸರಾಯರು ಯೋಜನೆಯನ್ನು ೫ ಮುಸ್ಲಿಂ ಲೀಗ ೫ ಕಾಂಗ್ರೆಸ ೩ ಇತರ ಎಂದು ಬದಲಾಯಿಸಿದರೆಂದೂ ಅದಕ್ಕೂ ಕಾಂಗ್ರೆಸ್ಸು ಒಪ್ಪದಿರಲು ಜೂನ ೧೬ ರ ನಡುಗಾಲ ಸರಕಾರ ಯೋಜನೆ ಹೊರಬಿತ್ತೆಂದೂ ಅವರು ಹೇಳಿದ್ದಾರೆ. ಮೊದಲಿನ ಸಂಖ್ಯೆಯನ್ನು ಬದಲಿಸುವದಿಲ್ಲವಾಗಿ ವಾಯಿಸರಾಯರು ಹೇಳಿದ್ದು ಹಾಗೆ ನಡೆಯಲು ತಪ್ಪಿದರೂ ತಾವು ಒಪ್ಪಿದುದಾಗಿ ಹೇಳಿ ವಾಯಿಸರಾಯರ ಮೇಲೆ ಜಿನ್ನಾ ಸಾಹೇಬರು ವಚನಭಂಗದ ಆರೋಪಗಳ ಮಾಲೆಯನ್ನೇ ಹೊರಿಸಿದ್ದಾರೆ. "ಈ ಅಕಸ್ಮಾತ್ ಬದಲಾವಣೆಗೆ ಯಾವ ರಹಸ್ಯ ಕಾರಣಗಳಿದ್ದವೋ ಕಂಡುಕೊಳ್ಳುವದು ಕಠಿನ" ಎನ್ನುತ್ತದೆ ಹೇಳಿಕೆ.

### ಬೆದರಿಕೆ

ವಾಯಿಸರಾಯರಿಗೆ ಸಂಬಂಧಿಸಿದಷ್ಟು ಮಟ್ಟಿಗೆ ಜಿನ್ನಾರ ಭಾಷೆ ತುಂಬ ರೋಷಪೂರ್ಣವಾಗಿದ್ದರೂ ಸೌಮ್ಯವಾಗಿಯೆ ಇದೆ. ಆದರೆ ಈ ಎಲ್ಲ ತಪ್ಪುಗಳನ್ನು ಅವರ ಸ್ವಾಭಾವಿಕ ಗುಣದಂತೆ ಅವರು ಕಾಂಗ್ರೆಸ್ಸಿನ ಹೆಗಲ ಮೇಲೆ ಹೊರಿಸಲು ಮುಂದಾದಾಗ ಮಾತ್ರ ಅವರ ಭಾಷೆ ತೀವ್ರವೂ ಸಹನೆ ಮೀರಿದ್ದೂ ಆಗಿ ಪರಿವರ್ತನೆಗೊಳ್ಳುತ್ತದೆ. ರಾಷ್ಟ್ರೀಯ ಮುಸ್ಲಿಮನೊಬ್ಬನನ್ನು ಆರಿಸುವ ಹಕ್ಕನ್ನು ಹಟದಿಂದ ಬೇಡಿದ ಕಾಂಗ್ರೆಸ್ಸನ್ನು ಟೀಕಿಸುತ್ತ ಅವರು ಶಾಸನ ಸಭೆಗಳ ಮುಸ್ಲಿಂ ಸ್ಥಾನಗಳಲ್ಲಿ ಕೇವಲ ನೂರಕ್ಕೆ ೪ ರಷ್ಟನ್ನು ಪಡೆದ ಕಾಂಗ್ರೆಸ್ಸಿಗೆ ಮುಸ್ಲಿಮರ ಪ್ರಾತಿನಿಧ್ಯ ವಹಿಸುವ ಹಕ್ಕೇ ಇಲ್ಲವೆಂದೂ ಹೇಳಿ "ಈ ಖೊಟ್ಟಿ ಬೇಡಿಕೆ" ಯನ್ನು ಲೀಗು ಒಪ್ಪಲಾರದೆಂದೂ ಇದರಲ್ಲಿ ಕಾಂಗ್ರೆಸ್ಸಿಗೆ "ಕುಹಕಪೂರ್ಣ ಉದ್ದೇಶ" ವಿದೆಯೆಂದೂ ಆಕ್ರೋಶಿಸಿದ್ದಾರೆ. ಇದಲ್ಲದೆ ಪ್ರಾಂತಗಳಿಗೆ ಗುಂಪುಗಳಿಂದ ಪ್ರಾರಂಭದಲ್ಲಿಯೇ ಹೊರಗುಳಿಯುವ ಹಕ್ಕುಂಟೆಂಬ ಕಾಂಗ್ರೆಸ್ ಸಾಧನೆಯನ್ನೂ ಅವರು ನಿರಾಕರಿಸಿದ್ದಾರೆ.

ಎಲ್ಲಕ್ಕಿಂತ ಹೆಚ್ಚಾಗಿ ಅವರು "ಕಾಂಗ್ರೆಸ್ಸು ಹೀಗೆಯೇ ರಾಯಭಾರದ ತಾ. ೨೫ ಮೇ ಹೇಳಿದ ಯೋಜನೆಯ ಸ್ವರೂಪವನ್ನು ನಿರರ್ಥಕ ಮಾಡುವದರಲ್ಲಿ ಹಟದಿಂದ ಮುಂದುವರಿದರೆ ಇಡಿ ಯೋಜನೆ ಪ್ರಾರಂಭದಲ್ಲಿಯೇ ಮುರಿದೊಗೆಯಲ್ಪಡುವದು" ಎಂದು ಎಚ್ಚರಿಕೆ ಕೊಟ್ಟಿದ್ದಾರೆ.

### ಪುನಃ ಯತ್ನಿಸುವೆವು

ಜಿನ್ನಾರ "ವಚನಭಂಗ"ದ ಆರೋಪವನ್ನು ವಾಯಿಸರಾಯರೂ ರಾಯಭಾರಿಗಳೂ ಒಪ್ಪಿಕೊಳ್ಳದೆ ಅವರಿಗೆ ಕೊಟ್ಟ ವಚನಗಳು ಎರಡೂ ಪಕ್ಷಗಳು ಯೋಜನೆಗೆ ಒಪ್ಪಿದ್ದರೆ ಮಾತ್ರ ಬಂಧಕವಾಗುತ್ತಿದ್ದವೆಂದು ಸಾಧಿಸಿದ್ದಾರೆ. ಘಟನಾ ಸಮಿತಿಯ ಚುನಾವಣೆಯನ್ನು ಮುಂದೆ ಹಾಕಬೇಕೆಂದು ಜಿನ್ನಾ ಅವರು ನಡುಗಾಲ ಸರಕಾರ ಯೋಜನೆ ಮೂಲೆಗುಂಪಾದೊಡನೆ ವಾಯಿಸರಾಯರನ್ನು ಕೇಳಿಕೊಂಡಿದ್ದರು. ಆದರೆ ಅದಕ್ಕೂ ವಾಯಿಸರಾಯರು ಒಪ್ಪಲಿಲ್ಲ. ಬದಲಿಗೆ ಘಟನಾ ಸಮಿತಿಯ ಚುನಾವಣೆ ಮುಗಿದೊಡನೆ ಇನ್ನೊಮ್ಮೆ ನಡುಗಾಲ ಸರಕಾರ ಸ್ಥಾಪನೆಯ ಪ್ರಯತ್ನ ಮಾಡಿ ನೋಡುವದಾಗಿ ಅವರು ಸೂಚಿಸಿದ್ದಾರೆ. ಈ ಅಂಶಗಳು ಜಿನ್ನಾ-ವೆವೆಲ ಪತ್ರವ್ಯವಹಾರದಿಂದ ತಿಳಿದು ಬರುತ್ತವೆ.

### ಪರಸ್ಪರ ವಿರುದ್ಧ ವಾಗ್ದಾನಗಳು

ಜಿನ್ನಾ ಸಾಹೇಬರ ರೌದ್ರವನ್ನು ಬಿಟ್ಟರೂ ಅವರ ಆಕ್ರೋಶಕ್ಕೆ ಕಾರಣವಿಲ್ಲದಿದ್ದಿಲ್ಲ. ವಾಯಿಸರಾಯರು ತಮ್ಮ ಯೋಜನೆಗಳಿಗೆ ಉಭಯ ಪಕ್ಷಗಳನ್ನೊಪ್ಪಿಸುವ ಹಸಿ ಹಂಬಲದಲ್ಲಿ ಇಬ್ಬರಿಗೂ ಬೇರೆ ಬೇರೆ ಬಗೆಯ ಮತ್ತು ಪರಸ್ಪರ ವಿರೋಧಿ ಮಾತುಗಳನ್ನು ಕೊಟ್ಟದ್ದರೆಂಬುದು ಮೌಲಾನಾ ಆಝಾದರು ತಾ. ೨೯ ಕ್ಕೆ ಹೊರಡಿಸಿದ ಪತ್ರವ್ಯವಹಾರದಿಂದ ಸ್ಪಷ್ಟವಾಗಿ ಗೋಚರವಾಗುತ್ತದೆ. ಮಂತ್ರಿತ್ರಯ ರಾಯಭಾರ ಹಿಂದುಸ್ತಾನಕ್ಕೆ ಬರುವ ಮೊದಲೇ ಜಿನ್ನಾಸಾಹೇಬರು ವಾಯಿಸರಾಯರಿಂದ ಕಾಂಗ್ರೆಸ್ ಲೀಗ ಸಮಪ್ರಾತಿನಿಧ್ಯ ಮೊದಲಾದ ವಿಷಯಗಳಲ್ಲಿ ಮಾತು ತೆಗೆದುಕೊಂಡಿದ್ದರು. ಸಾಲದ್ದಕ್ಕೆ ಜೂನ ೧೬ರ ಪತ್ರದಲ್ಲಿ ಅವರಿಗೆ ಇನ್ನಷ್ಟು ಸವಲತ್ತುಗಳು ದೊರೆತಿದ್ದವು. ಉಭಯ ಜಾತಿಗಳ ಮಂತ್ರಿಗಳ ಬಹುಮತದ ಬೆಂಬಲವಿಲ್ಲದೆ ನಡುಗಾಲ ಸರಕಾರ ಯಾವದೇ ಜಾತೀಯ ಮಹತ್ವದ ನಿರ್ಣಯ ತೆಗೆದುಕೊಳ್ಳಬಾರದು, ಮಂತ್ರಿಮಂಡಲದಲ್ಲಿ ಜೂನ ೧೬ ರ ಪ್ರಕಟನೆಯಲ್ಲಿ ಹೇಳಿದ ಜಾತೀಯ ಪ್ರಮಾಣವನ್ನು ಬದಲಿಸಬಾರದು. ಜೂನ ೧೬ ರ ಹೇಳಿಕೆಯಲ್ಲಿ ಉಭಯ ಪಕ್ಷಗಳ ಒಪ್ಪಿಗೆಯಿಲ್ಲದೆ ಬದಲಾವಣೆ ಮಾಡಬಾರದು ಇತ್ಯಾದಿ. ಈ ಭಾಷೆಗಳಿಂದ ಜಿನ್ನಾರವರ ಅಶೋತ್ತರ ಫಲಿಸಿದಂತೆ ತೋರಿ ಅವರು ಬಹಳ ಪ್ರಸನ್ನರಾಗಿದ್ದರೂ ಅವೇ ನಡುಗಾಲ ಸರಕಾರದ ಯೋಜನೆಯ ಅಧಃಪಾತದ ಮೂಲ ಕಾರಣವಾದವೆಂದು ಹೇಳಲು ಅಡ್ಡಿಯಿಲ್ಲ. ವಾಯಿಸರಾಯರ ವಿಶೇಷಾಧಿಕಾರ, ಯುರೋಪಿಯನ್ ಮತಗಳ ವಿಷಯಕ್ಕೆ ಕಾಂಗ್ರೆಸ್ ಆಕ್ಷೇಪಗಳಿಗೆ ವಾಯಿಸರಾಯರಿಂದ ದೊರೆತ ಸಮಾಧಾನಗಳು ಅವರಿಗೆ ತೃಪ್ತಿಯನ್ನುಂಟು ಮಾಡಿದರೂ ಜಿನ್ನಾರಿಗೆ ಕೊಟ್ಟ ಆಶ್ವಾಸನಗಳ ಬೆಳಕಿನಲ್ಲಿ ನಡುಗಾಲ ಯೋಜನೆಯನ್ನು ನೋಡಿದಾಗ ಅದು ಯಶಸ್ವಿಯಾಗುವ ಸಂಜ್ಞೆ ಅವರಿಗೆ ಕಾಣಸಲಿಲ್ಲ. ಕೊನೆಗಳಿಗೆಗೆ ಬಿಕ್ಕಟ್ಟು ಉಂಟಾಗುವದು ನಿಶ್ಚಯವೆಂದು ಅವರಿಗೆ ಮನವರಿಕೆಯಾಗಿತ್ತು. ಎಂಬುದು ಈ ಪತ್ರವ್ಯವಹಾರದಿಂದ ಸ್ಪಷ್ಟವಾಗುತ್ತದೆ. ಸಮಪ್ರಾತಿನಿಧ್ಯ ತಮ್ಮ ಉದ್ದೇಶವಿಲ್ಲವೆಂದು ವಾಯಿಸರಾಯರು ಮಾತಿನಲ್ಲಿ ಹೇಳಿದರೂ ಅತ್ತ ಜಿನ್ನಾರಿಗೆ ನಡುಗಾಲ ಸರಕಾರದ ಮಂತ್ರಿಗಳ ಜಾತೀಯ ಸಂಖ್ಯಾ ಪ್ರಮಾಣ ಬದಲಿಸುವದಿಲ್ಲೆಂದು ಮಾತು ಕೊಟ್ಟದ್ದನ್ನು ಕಾಣುತ್ತೇವೆ. ಇದು ಜಾತೀಯ ಸಮಸ್ಯೆಯ ಬಿಡುವಳಿಯ ಉಪಾಯವಲ್ಲವೆಂದು ಬಾಯಲ್ಲಿ ಹೇಳಿದರೂ ಅತ್ತ ಜಿನ್ನಾರ ಭಯಕ್ಕೆ ರಾಷ್ಟ್ರೀಯ ಮುಸ್ಲಿಮನೊಬ್ಬನನ್ನು ಕಾಂಗ್ರೆಸ ಯಾದಿಯಲ್ಲಿ ಕೂಡ ಸೇರಿಸಲು "ವಿದಿತ ಕಾರಣಗಳಿಗಾಗಿ" ಅವರು ಒಪ್ಪಲಿಲ್ಲ. ಇದರಿಂದ ಆ "ವಿಷಮಯ" ತತ್ವವಾದ ಸಮಪ್ರಾತಿನಿಧ್ಯ ಮತ್ತು ಅದಕ್ಕೂ ಹೆಚ್ಚಾಗಿ ಕಾಂಗ್ರೆಸ್ಸು ಮುಸ್ಲಿಮರಿಂದ ಪೂರ್ತಿಯಾಗಿ ದೂರಗೊಳಿಸುವ ಧೂರ್ತತೆಯ ಇನ್ನೊಂದು ಸ್ವರೂಪವೇ ಈ ಯೋಜನೆಯೆಂದು ಕಾಂಗ್ರೆಸ್ಸು ನಿರಾಕರಿಸಬೇಕಾಯಿತು. "ಮೂಲ ತತ್ವಗಳಲ್ಲಿ ಸವಲತ್ತು ಕೊಡುವದು ಸಾಧ್ಯವಿಲ್ಲ" ಎಂದು ಕಾಂಗ್ರೆಸ್ಸು ಸ್ಫುಟವಾಗಿ ಹೇಳಿತು.

### ಸೊಂಡೂರಿನ ಮುನ್ನಡೆ

ಜುಲೈ ೧ ಕ್ಕೆ ಸೊಂಡೂರ ಸಂಸ್ಥಾನ ಪ್ರಜಾತಂತ್ರದ ಕಡೆಗೆ ಒಂದು ಮಹತ್ವದ ಹೆಜ್ಜೆಯಿಟ್ಟಿತೆಂದು ಹೇಳಬಹುದು. ೧೯೪೬ ರ ಘಟನಾ ಕಾಯಿದೆಯಲ್ಲಿ ಪ್ರಜಾ ಮಂಡಲಕ್ಕೆ (ಶಾಸನ ಸಭೆ) ತನ್ನ ಅಧ್ಯಕ್ಷ ಉಪಾಧ್ಯಕ್ಷರನ್ನು ಆಯ್ದುಕೊಳ್ಳುವ ಅಧಿಕಾರ ಕೊಟ್ಟದ್ದು. ಇನ್ನೊಂದು ಕಾಯಿದೆ ಮುಖಾಂತರ ಲೋಕನಿಯುಕ್ತ ಮಂತ್ರಿಯ ನೇಮಕಕ್ಕೆ ಮಹಾರಾಜರು ಅವಕಾಶ ದೊರಕಿಸಿಕೊಟ್ಟಿದ್ದಾರೆ. ಈ ಪ್ರಕಾರ ಪ್ರಥಮ ಲೋಕನಿಯುಕ್ತ ಮಂತ್ರಿಗಳಾದ ಶ್ರೀ ಶ್ರೀನಿವಾಸರಾವ ಭೀಮಸೇನರಾವ ಸರಾಫರ ಅಧಿಕಾರ ಗ್ರಹಣ ಸಮಾರಂಭ ಜುಲೈ ೧ಕ್ಕೆ ಸೇರಿದ ದರ್ಬಾರದಲ್ಲಿ ಆಯಿತು. ಈ ವಿಷಯವಾಗಿ ಸೊಂಡೂರ ಮಹಾರಾಜರು ಉಭಯ ಶಾಸನ ಸಭೆಗಳ ಸಂಯುಕ್ತಾಧಿವೇಶನದಲ್ಲಿ ಮಾಡಿದ ಭಾಷಣ ಸದಾಶಯಗಳಿಂದ ಭರಿತವಾಗಿತ್ತು. ಕರ್ನಾಟಕದ ಬಗ್ಗೆಯೂ ಮಹಾರಾಜರು ಬಾಂಧವ್ಯದ ಮಾತುಗಳನ್ನಾಡಿದ್ದು ಅಭಿನಂದನೀಯ.





# ಅಂತರ್ ರಾಷ್ಟ್ರೀಯ

### ಪರಮಾಣು ಪ್ರಯೋಗ

ಕೆಲವೇ ವರ್ಷಗಳ ಕೆಳಗೆ ರಶಿಯಾದ ಕ್ರಾಂತಿಕಾರ ಲಿಯಾನ ಟ್ರಾಟ್ಸಿ ಅಮೇರಿಕೆಯನ್ನು "ಮಾನವ ಜಾತಿಯ ಭವಿಷ್ಯವನ್ನು ರೂಪಿಸುವ ಕುಲುಮೆ" ಯೆಂದು ಕರೆದಿದ್ದನು. ಈ "ಕುಲುಮೆ" ಯ ಕೈಯಲ್ಲಿ ಮಾನವನ ಹಣೆಬರಹವನ್ನು ಕೊನೆಯ ವರೆಗೆ ನಿರ್ಣಯಿಸಬಹುದಾದ ಪರಮಾಣು ಶಕ್ತಿಯ ವಿಮೋಚನೆಯ ಗುಟ್ಟು ಸಿಕ್ಕಿದೆ. ಅದನ್ನು ಆ ದೇಶ ವಿಸ್ತರಿಸುತಿರುವ ರೀತಿಯನ್ನು ನೋಡಿದರೆ ಆ ಕುಲುಮೆಯಲ್ಲಿ ರೂಪಿತವಾಗುತಿರುವ ಮಾನವನ ಭವಿತವ್ಯ ಬಹಳ ಕರಾಳವಾಗಬಹುದೆಂಬ ಭಯ ತೋರಿಬರತೊಡಗಿದೆ.

ಕಳೆದ ವರ್ಷ ಅಗಸ್ಟ ಎರಡನೆ ವಾರದಲ್ಲಿ ಜಪಾನದ ಎರಡು ಜನನಿಬಿಡ ನಗರಗಳನ್ನು ಈ ಪರಮಾಣು ಬಾಂಬುಗಳು ಹೇಳಹೆಸರಿಲ್ಲದಂತೆ ಧ್ವಂಸ ಮಾಡಿ ಜಗತ್ತನ್ನು ಬೆಚ್ಚಿಸಿದವು ಅಂದಿನಿಂದೀಚೆಗೆ ಈ ಪ್ರಚಂಡ ಶಕ್ತಿಯ ನಿಯಂತ್ರಣದ ವಿಷಯಕ್ಕೆ ನಡೆದ ಚರ್ಚೆಗಳಿಂದ ರಾಷ್ಟ್ರಗಳಲ್ಲಿ ಪರಸ್ಪರ ಸಂದೇಹ, ವೈಷಮ್ಯಗಳು ಬೆಳೆದಿವೆ ಮೂರನೆ ಮಹಾಯುದ್ಧಕ್ಕೆ ಇದೇ ಬೀಜವಾಗಬಹುದು. ಮತ್ತು ಪರಮಾಣು ಆಯುಧಗಳು ಅದರಲ್ಲಿ ಬೇಕುಬೇಕಾದಂತೆ ಉಪಯೋಗಿಸಲ್ಪಡಬಹುದು. ಪರಿಣಾಮ ಏನಾದೀತೆಂದು ಊಹಿಸಲು ತರ್ಕಶಕ್ತಿಯೇ ಅವಶ್ಯವಿಲ್ಲ.

ಮೊನ್ನೆ ಜುಲೈ ೧ ನೇ ತಾರೀಕು ಬೆಳಗಿನ ಜಾವ ೩—೩೦ ಕ್ಕೆ (ಅಲ್ಲಿ ಮುಂಜಾನೆ ೯ ಗಂಟೆ) ಶಾಂತ ಸಾಗರದ ಬಿಕಿನಿ-ಅಟೋಲ ದ್ವೀಪ ಪ್ರದೇಶದಲ್ಲಿ ಅಮೇರಿಕೆ ತನ್ನ ಬಹಳ ಕಾಲದಿಂದ ಪ್ರಚಾರ ಮಾಡಲ್ಪಟ್ಟ ಪರಮಾಣು ಬಾಂಬ ಪ್ರಯೋಗವನ್ನು ನಡೆಸಿತು. ತನಗಾಗದ ರಾಷ್ಟ್ರಗಳ ವಿರುದ್ಧ ಒಂದು ಬಗೆಯ ಮಾನಸಿಕ ಯುದ್ಧವೆಂದೇ ಈ ಪ್ರಚಾರ ಸಾಗಿದ್ದಂತೆ ತೋರುತ್ತದೆ. ಅದೇನೇ ಇರಲಿ, ೭೦ ಹಡಗಗಳನ್ನು-ಅಮೇರಿಕನ್ ಮತ್ತು ಜಪಾನಿ—ಕುದುರೆ ನಾಲದಂತೆ ಸಾಲಾಗಿ ನಿಲ್ಲಿಸಿ ಅವುಗಳ ಮೇಲೆ ವಿಮಾನಗಳಿಂದ ಪರಮಾಣು ಬಾಂಬನ್ನು ಎಸೆಯಲಾಯಿತು. ಈ ಪ್ರಯೋಗಕ್ಕೆ ಅದ್ಭುತ ಪೂರ್ವಸಿದ್ಧತೆಗಳಾಗಿದ್ದವು. ಬಿಕಿನಿ ದ್ವೀಪವನ್ನು ತಾಸುಗಟ್ಟಲೆ ಮೊದಲೇ ಪೂರ್ಣವಾಗಿ ತೆರವು ಮಾಡಲಾಗಿತ್ತು. ೪೦,೦೦೦ ವೈಜ್ಞಾನಿಕರೂ ತಜ್ಞರೂ ನಿರೀಕ್ಷಕರೂ ೨೦ ಮೈಲು ದೂರದಲ್ಲಿ ೧೫೦ ಹಡಗಗಳಲ್ಲಿ ತುಂಬಿ ನೋಡುತಿದ್ದರು. ಪ್ರಯೋಗಕ್ಕೆ ಗುರಿಯಾದ ಹಡಗುಗಳಲ್ಲಿ ೨೦೦ ಹಂದಿಗಳು, ೨೦೦ ಕುರಿಗಳು, ೩೦೦೦ ಬಿಳಿ ಇಲಿಗಳು ಮಾತ್ರ ಆ ಹಡಗಗಳ ಗತಿಯಲ್ಲಿ ಸಹಭಾಗಿಯಾಗಲು ಅವುಗಳಲ್ಲಿ ಇರಿಸಲ್ಪಟ್ಟಿದ್ದವು ಸಿಡಿಯಬೇಕಾದ ಪರಮಾಣು ಬಾಂಬನ್ನು ಹೊತ್ತು ೨೦೦ ಮೈಲು ದೂರದಿಂದ ವಿಮಾನ ಹಾರಿಬಂತು. ಈ ಪ್ರಯೋಗಕ್ಕೆ ಒಟ್ಟು ೭ ಕೋಟಿ ಡಾಲರುಗಳು ಅಂದರೆ ಸುಮಾರು ೨೩ ಕೋಟಿ ರೂಪಾಯಿಗೂ ಹೆಚ್ಚು ವೆಚ್ಚವಾಗುವದೆಂದು ಲೆಕ್ಕ ಹಾಕಿದ್ದಾರೆ. ಒಂದು ಪ್ರಚಂಡ ಧ್ವಂಸ ಕಾರ್ಯಕ್ಕೆ ಎಂಥ ಅದ್ಭುತ ವೆಚ್ಚ!

ಬಿಕಿನಿಯಲ್ಲಿ ಬೆಳಗು ಸುಂದರವಾಗಿತ್ತು. ಹವೆ ಪ್ರಸನ್ನವಾಗಿತ್ತು. ನಾಲ್ಕನೆ ಪರಮಾಣು ಬಾಂಬನ್ನು ಹೊತ್ತು ವಿಮಾನ ೧೦೦೦೦ ಅಡಿ ಎತ್ತರದಲ್ಲಿ ಸುತ್ತು ಬಂತು. (ಈ ಮೊದಲಿನ ಮೂರು ಬಾಂಬುಗಳಲ್ಲಿ ಮೊದಲನೆಯದು ನ್ಯೂಮೆಕ್ಸಿಕೋದಲ್ಲಿ ಪ್ರಾಥಮಿಕ ಪ್ರಯೋಗಕ್ಕಾಗಿ ಮತ್ತು ಮುಂದಿನೆರಡು ಹಿರೋಶಿಮಾ, ನಾಗಸಾಕಿ ನಗರಗಳ ಮೇಲೆ ಎಸೆಯಲ್ಪಟ್ಟಿದ್ದವು) ಬಾಂಬು ಕ್ಷಣದಲ್ಲಿ ಕೆಳಗುದುರಿತು.

ನಿಶ್ಶಬ್ದ. ೨ ನಿಮಿಷಗಳಲ್ಲಿ ಪ್ರಚಂಡ ಸ್ಫೋಟ. ತುಸುಹೊತ್ತಿನ ಬಳಿಕ ಇನ್ನೊಂದು ಸ್ಫೋಟ ದುರ್ದೈವಿ ಹಡಗಗಳನ್ನೆಲ್ಲ ಹೊಗೆಯ ಮೋಡ ಮುಸುಕಿತು. ೩೫೦೦೦ ಅಡಿ ಎತ್ತರದ ವರೆಗೆ ಅದು ಆಕಾಶದಲ್ಲಿ ವ್ಯಾಪಿಸಿತ್ತು. ಹತ್ತಿರವಿದ್ದವರಿಗೆ ಅದರ ಸಪ್ಪಳ ನಿರೀಕ್ಷಿಸಿದಷ್ಟು ಭಯಂಕರವಾಗಿ ಕೇಳಿಸಲಿಲ್ಲವಂತೆ. ಆದರೆ ೧೪೦ ಮೈಲಿ ದೂರ ಕ್ವಾಜಲಿನ್ ದ್ವೀಪದಲ್ಲಿದ್ದ ನಿರೀಕ್ಷಕರಿಗೆ ಅದರ ಸ್ಫೋಟ ಕಾಣಿಸಿತು. ೧೦ ಮೈಲು ದೂರದಲ್ಲಿರುವವರಿಗೆ ಹೊಗೆ ಮೋಡ ನಿಚ್ಚಳವಾಗಿ ತೋರುತ್ತಿತ್ತು.

ಕೆಲ ನಿಮಿಷಗಳು. ಹೊಗೆ ಮೋಡಗಳಲ್ಲಿ ವಿಮಾನಗಳು ನುಗ್ಗಿದವು. ರೇಡಿಯೋ ಚಟುವಟಿಕೆಯ ಪರಿಣಾಮ ಅರಿತುಕೊಳ್ಳಲು. ರೇಡಿಯೋ ನಿಯಂತ್ರಿತ ಮೋಟರ ಟಾರ್ಪೆಡೋ ಬೋಟುಗಳನ್ನು ನೀರಿನಲ್ಲಿ ಇಳಿಸಲಾಯಿತು. ಅವು "ಗಂಡಾಂತರವಿಲ್ಲ" ವೆಂದು ಸೂಚಿಸಿದಾಗ ೪೦೦೦೦ ನಿರೀಕ್ಷಕರು ಹಡಗಗಳನ್ನು ಸಮೀಪಿಸಿದರು.

### ನಿರಾಶಾದಾಯಕ!

ಪರಿಣಾಮ ಸಾಕಷ್ಟು ಭಯಂಕರವಾಗಿತ್ತು. ಬಿಕಿನಿ ದ್ವೀಪದ ತಾಳಿಗಿಡದ ಸಾಲುಸಾಲುಗಳೆ ಭಸ್ಮವಾಗಿದ್ದವು. ಅನೇಕ ಹಡಗುಗಳಿಗೆ ಜ್ವಾಲೆ ಅಂಟಿಕೊಂಡಿತ್ತು. ಎಲ್ಲ ಹಡಗಗಳು ನೀರಲ್ಲಿ ಮುಳುಗಿ ೫ ನಿಮಿಷಗಳ ಬಳಿಕ ಮೇಲೆದ್ದುವಂತೆ. ಎರಡು ಸಾರಿಗೆ ಹಡಗಗಳೂ ಎರಡು ವಿನಾಶಿಕೆಗಳೂ ಮುಳುಗಿವೆ. ೨೫ ಕ್ಕೂ ಮಿಕ್ಕಿದ ಹಡಗುಗಳಿಗೆ ಬಹಳ ಹಾನಿಯಾಗಿದೆ. ಇಡೀ ಪ್ರಯೋಗದ ನೇತೃಗಳಾಗಿದ್ದ ಅಡ್ಮಿರಲ್ ಬ್ಲ್ಯಾಂಡಿಯವರು ಪರಿಣಾಮವನ್ನು ನಿರೀಕ್ಷಿಸಲು ಹಡಗಗಳ ಸಮೀಪಕ್ಕೆ ಹೋದವರು ರೇಡಿಯೋ ಚಟುವಟಿಕೆಯ ಪ್ರಚಂಡತೆಯನ್ನು ತಡೆಯಲಾರದೆ ಬೇಗನೆ ಕಾಲ್ದೆಗೆದರು. ರೇಡಿಯೋ ಚಟುವಟಿಕೆಯ "ಯಮಪಾಶ" ದ ಕಾರಣದಿಂದ ಯಾರೂ ಸಮೀಪ ಹಾಯಬಾರದೆಂದು ಸೂಚಿಸಲಾಗಿತ್ತು.

ಆದರೂ ಈ ಪ್ರಯೋಗ ನಿರಾಶಾಜನಕವಾಗಿತ್ತೆಂದು ಸುದ್ದಿಗಾರರ ಹೇಳಿಕೆ ಅನಿರೀಕ್ಷಿತವಾದುದೇನೂ ಘಟಿಸಿರಲಿಲ್ಲ. ಪರಮಾಣು ವಿಜ್ಞಾನಿ ರಾಬರ್ಟ ಪೆಲ್ಲರಿಯೆಂಬವನು ಅಧ್ಯಕ್ಷ ಟ್ರೂಮನ್ನರಿಗೆ ಎಚ್ಚರಿಕೆಯಿತ್ತಂತೆ ನೀರಿನಲ್ಲಿ ಪರಮಾಣು ಸ್ಫೋಟದಿಂದ ಸ್ಫೋಟಕ್ರಿಯೆ ಸರಪಣಿಯಂತೆ ಮುಂದುವರಿದು ಜಗತ್ತಿನನಾಶವೊದಗುವಂತೇನೂ ತೋರಲಿಲ್ಲ. ತೆರೆಗಳಾಗಲಿ ಭೂಕಂಪವಾಗಲಿ ಏಳಲಿಲ್ಲ. ರೇಡಿಯೋ ಚಟುವಟಿಕೆಯೂ ಅಷ್ಟೇನೂ ತೀವ್ರವಾಗಿದ್ದಿಲ್ಲ. ನಾಗಸಾಕಿಯಲ್ಲಿ ಎದ್ದ ಹೊಗೆಗಿಂತ ಇಲ್ಲಿ ಎದ್ದುದು ಬರಿ ಅರ್ಧದಷ್ಟು ಮಾತ್ರವಿತ್ತು. ಪರಿಣಾಮವೂ ನಾಗಸಾಕಿಯಲ್ಲಿ ಆದಂತೆಯೆ ಆದೀತೆಂದು ನಂಬಲಾಗಿದೆ. ಅಷ್ಟೇಕೆ? ಪ್ರಯೋಗಕ್ಕೆ ಗುರಿಯಾಗಿದ್ದ ಹಡಗಗಳಲ್ಲಿದ್ದ ಆ ದುರ್ಭಾಗ್ಯ ಪ್ರಾಣಿಗಳಲ್ಲಿ ಕೆಲವು ನಡುಗುತಿದ್ದರೂ ಬದುಕಿದ್ದುದು ಕಂಡುಬಂತಂತೆ.

ನಿರಾಶೆಯಲ್ಲದೆ ಮತ್ತೇನಿದು?

### ಟ್ರೀಸ್ಟೆ—ತೊಡಕಿನ ಮೂಲ

ಕಳೆದ ಶುಕ್ರವಾರದೊಳಗೆ ಯುರೋಪಿಯನ್ ಶಾಂತಿ ಒಪ್ಪಂದದ ವಿಷಯಕ್ಕೆ ಒಪ್ಪಂದಕ್ಕೆ ಬರಬೇಕೆಂದು ಹಟದಿಂದ ಮುಂದೆ ಸಾಗಿದ್ದರೂ ಚತುರ್ರಾಷ್ಟ್ರ ವಿದೇಶ ಮಂತ್ರಿಗಳು ಪ್ಯಾರಿಸಿನಲ್ಲಿ ಬಹಳ ಮುಂದೆ ಸಾಗಲಾರದೇ ಹೋದರು. ತೊಂದರೆ ಅಡ್ರಿಯಾಟಿಕ್ ಸಮುದ್ರ ಬಂದರವಾದ ಟ್ರಿಸ್ಟೆಯದೆ. ಇಟಲಿ ಯುಗೋಸ್ಲಾವಿಯಾಗಳ ನಡುವೆ ವಿವಾದಕ್ಕೆ ಕಾರಣವಾದ ಈ ಬಂದರವನ್ನು ೧೦ ವರ್ಷಗಳ ವರೆಗೆ ಚತುರ್ರಾಷ್ಟ್ರಗಳ ಆಡಳಿತೆಗೊಪ್ಪಿಸಬೇಕು ಮತ್ತು ಅವರ ಸಂರಕ್ಷಣೆಯ ಹೊಣೆಯನ್ನು ಯುಕ್ತರಾಷ್ಟ್ರ ಸಂಸ್ಥೆ ಹೊರಬೇಕು, ಎಂದು ಫ್ರೆಂಚ ವಿದೇಶ ಮಂತ್ರಿ ಬಿಡಾಲ್ಟರು ಸೂಚಿಸಿದಾಗ ಈ ಮಧ್ಯ ಮಾರ್ಗವೇ ಒದಗಿದ ತೊಡಕಿನಿಂತ ಹೊರಗೆ ದಾರಿ ತೋರುವದೆಂದು ಆಶೆಯುಂಟಾಗಿತ್ತು. ಏಕೆ, ಯುರೋಪ ರಾಷ್ಟ್ರಗಳ ಶಾಂತಿ ಒಪ್ಪಂದದ ಕರಡು ಸಿದ್ಧವಾಗಿ ತಾ ೨೫ ಕ್ಕೆ ೨೧ ರಾಷ್ಟ್ರಗಳ ಶಾಂತಿ ಪರಿಷತ್ತು ಕೂಡಬಹುದೆಂದು ಕೂಡ ನಂಬಲಾಗಿತ್ತು. ಆದರೆ ಟ್ರೀಸ್ಟೆ ಪೂರ್ಣ ಚತುರಾಷ್ಟ್ರಗಳ ಆಡಳಿತೆಗೊಳಗಾಗಬೇಕೆಂಬ ಸೋವಿಯಟ್ ಬೇಡಿಕೆ ಮತ್ತು ಯುಕ್ತರಾಷ್ಟ್ರಗಳ ಪೂರ್ಣ ಹೊಣೆಯ ಕೆಳಗೆ ಚತುರ್ರಾಷ್ಟ್ರಗಳ ಆಡಳಿತವಿರಬೇಕೆಂಬ ಅಂಗ್ಲೋ ಅಮೇರಿಕನ್ ಹಟದ ನಡುವೆ ಕಗ್ಗಂಟು ಕಗ್ಗಂಟಾಗಿಯೆ ಉಳಿದಿದೆ.

### ಪಾಲಿಸ್ತಾನದಲ್ಲಿ ಕಠೋರ ಕ್ರಿಯೆ

ಬ್ರಿಟಿಶ ಧೋರಣೆಯಲ್ಲಿ ಸಾಮಾನ್ಯವಾಗಿರುವಂತೆ, ಪಾಲಿಸ್ತಾನದಲ್ಲಿಯೂ ಅವರು ಒಂದು ನೆವಕ್ಕಾಗಿ ಕಾಯುತಿದ್ದರು. ಯಹೂದ್ಯರು ವಿದೇಶಮಂತ್ರಿ ಬೆವಿನ್ನರ ಯಹೂದ್ಯವಿರೋಧಿ ಹೇಳಿಕೆಗೆ ಪ್ರತೀಕಾರ ರೂಪವಾಗಿ ಭಯೋತ್ಪಾದನ ವ್ಯಾಪಾರದಲ್ಲಿ ಪ್ರವೃತ್ತರಾದುದೇ ತಡ, ಬ್ರಿಟಿಶರು ಒಮ್ಮಿಂದೊಮ್ಮೆ ಅವರ ಮೇಲೆ ಪ್ರಚಂಡವಾಗಿ ಎರಗಿದರು. ೩೧ ಜನ ಯಹೂದ್ಯ ಅಪಾದಿತರಲ್ಲಿ ಕೆಲವರನ್ನು ಆಜನ್ಮ ಸೆರೆಮನೆ ಮತ್ತು ಉಳಿದವರನ್ನು ೧೫ ವರ್ಷ ಶಿಕ್ಷೆಗೆ ಗುರಿಮಾಡಿದ್ದು ಮೊದಲನೆಯ ಹೊಡೆತ. ಸ್ತ್ರೀ ಅಪಾದಿತರನ್ನು ಕೂಡ ಈ ಶಿಕ್ಷೆಯಿಂದ ಉಳಿಸಲಿಲ್ಲ. ಅದರ ಬೆನ್ನಿಗೆ ಬಂತು ಯಹೂದ್ಯ ವಸತಿಗಳ ಅಸಾಧಾರಣ ಝಡತಿ. ಮಹಾ ಮದ್ದುಗುಂಡುಗಳ ಸಂಗ್ರಹಗಳು, ಅಕ್ರಮ ಚಟುವಟಿಕೆಗಳ ಕೇಂದ್ರಗಳು ಅವರಿಗೆ ಸಿಕ್ಕಿದವಂತೆ. ಮೂರನೆಯದಾಗಿ ಬಂದಿದೆ ಬಂಧನ ಸತ್ರ. ಪಾಲಿಸ್ತಾನಕ್ಕೆ ಯಹೂದ್ಯ ವಸಾಹತುಗಾರರ ಆಗಮನ ವಿಷಯದಲ್ಲಿ ಸಲಹೆ ಕೊಡಲು ಪಾಲಿಸ್ತಾನ ಸರಕಾರದಿಂದ ಅಂಗೀಕಾರ ಪಡೆದ ಅಧಿಕೃತ ಯಹೂದ್ಯ ಸಂಸ್ಥೆಯಾದ ಪಾಲಿಸ್ತಾನ ಯಹೂದ್ಯ ಏಜನ್ಸಿಯ ಕಾರ್ಯಕಾರಿ ಮಂಡಲದ ಬಂಧನ! ಅಕ್ರಮ ಚಟುವಟಿಕೆಗಳ ಸಂಶಯದಿಂದ ಬಂಧಿಸಲ್ಪಟ್ಟವರ ಸಂಖ್ಯೆ ೨೭೦೦ ಕ್ಕೇರಿದೆ. ಏಜನ್ಸಿಯ ಸದಸ್ಯನಾದ ರಬ್ ಜೆಹೂದಾ ಫಿಸ್ಟಮನ್ನನು ಬಂಧನದಲ್ಲಿ ಅನ್ನತ್ಯಾಗ ಮಾಡಿದ್ದರಿಂದ ಅವನ ಸ್ಥಿತಿ "ಚಿಂತಾಜನಕ" ವಾಗಿದೆಯಂತೆ. ಬಂಧನ—ಝಡತಿ ಕಾಲಕ್ಕೆ ಪ್ರತಿಭಟಿಸಿ ಕೆಲ ಯಹೂದ್ಯರು ಮರಣ ಹೊಂದಿದರು.

ಪಾರ್ಲಮೆಂಟಿನಲ್ಲಿ ಈ ವಿಷಯ ಅವಸರದ ನಿಲುವಳಿಯೊಂದನ್ನು ಕೂಲಿಕಾರ ಸದಸ್ಯರೊಬ್ಬರು ತಂದದ್ದರಿಂದ ಈ ದಬ್ಬಾಳಿಕೆಯ ವಿರುದ್ಧ ಪಾರ್ಲಮೆಂಟಿನಲ್ಲಿ ಪ್ರಬಲ ಅಭಿಪ್ರಾಯುಂಟಾಗಿದೆಯೆಂದು ತೋರಿಬಂತು. ಅಟ್ಲಿಯವರು, ಯಹೂದ್ಯರು ಭಯೋತ್ಪಾದಕ ಚಟುವಟಿಕೆಗಳನ್ನು ಪ್ರಾರಂಭಿಸಿದ್ದರಿಂದ ಈ ಕ್ರಿಯೆಯನ್ನು ಕೈಕೊಂಡದ್ದು ನ್ಯಾಯವೆಂದು ಸಾಧಿಸಿದರೂ ಕೂಲಿಕಾರ ಸದಸ್ಯರು ಕೆಲವರಿಗೆ ಸಮಾಧಾನವಾಗಿಲ್ಲ ಅವರು ಯಹೂದ್ಯರ ಪರವಾಗಿ ಇನ್ನೂ ಕೆಲಸ ಮಾಡುತಿದ್ದಾರೆ.

ಯಹೂದಿ ಧುರೀಣರ ಬಿಡುಗಡೆಗೆ ಪಾಲಿಸ್ತಾನ ಮತ್ತು ಅಮೇರಿಕೆಗಳಲ್ಲಿ ಚಳವಳಿ ಪ್ರಾರಂಭವಾಗಿದೆ. ಅಧ್ಯಕ್ಷ ಟ್ರೂಮನ್ನರು ಯಹೂದ್ಯ ಏಜನ್ಸಿಯ ಕಾರ್ಯಕಾರಿ ಸದಸ್ಯರ ಬಂಧನಕ್ಕೆ ಮೊದಲು ಬ್ರಿಟಿಶರು ತಮಗೆ ತಿಳಿಸಿದ್ದಿಲ್ಲವೆಂದು ಸಾರಿರುವದಲ್ಲದೆ ಯುರೋಪಿನ ೧೦ ಲಕ್ಷ ನಿರಾಶ್ರಿತ ಯಹೂದ್ಯರನ್ನು ಪಾಲಿಸ್ತಾನಕ್ಕೆ ವರ್ಗಾಯಿಸುವ ವೆಚ್ಚವನ್ನೂ ತಾಂತ್ರಿಕ ಹೊಣೆಯನ್ನೂ ಅಮೇರಿಕನ್ ಸರಕಾರ ವಹಿಸಲು ಸಿದ್ಧವಾಗಿದೆಯೆಂದೂ ಮಾತು ಕೊಟ್ಟಿದ್ದಾರೆ. ಇದರಿಂದ ಈ ವಿಷಯದಲ್ಲಿ ಯಹೂದ್ಯರ ಪಕ್ಷದಲ್ಲಿ ಎಷ್ಟು ದೂರ ಹೋಗಲೂ ಅಮೇರಿಕೆ ಸಿದ್ಧವಾಗಿದೆಯೆಂದು ತೋರುತ್ತದೆ.

ಈ ಒಪ್ಪಂದದ ಮುಂದೆ ಬ್ರಿಟಿಶ ಸರಕಾರ ಎಷ್ಟು ದಿನ ಅರಬರ ಪಕ್ಷದಲ್ಲಿ ನಿಲ್ಲಬಹುದು?

### ಮನೋರಂಜಕ ಅಪಹಾರ

ಕಳೆದ ವಾರ ಒಂದು ದಿನ, ಸೊಮುರಕಾರ್ತದ ಒಂದು ಹಾಟೆಲಿನಲ್ಲಿಳುಕೊಂಡಿದ್ದ ಇಂಡೊನೇಶಿಯಾದ ಪ್ರಧಾನ ಮಂತ್ರಿ ಡಾ. ಶಹರೀರರು ಅಕಸ್ಮಾತ್ತಾಗಿ ಕಣ್ಮರೆಯಾದರು. ಅವರೊಡನೆ ಸಾರ್ವಜನಿಕ ಹಿತರಕ್ಷಕ ಮಂತ್ರಿ ಧರ್ಮರಾಜರೂ ಕಾಣೆಯಾಗಿದ್ದರು. ಸಶಸ್ತ್ರ ಜನರು ಕೆಲವರು ಹಾಟೆಲಿನಲ್ಲಿ ಹೊಕ್ಕು ಅವರನ್ನು ಅಪಹರಿಸಿಕೊಂಡೊಯ್ದರೆಂದು ತಿಳಿದುಬಂತು.

ವಾರ್ತೆ ಮಿಂಚಿನಂತೆ ಹಬ್ಬಿತು. ಜೋಗ್ಜಕಾರ್ತದಲ್ಲಿದ್ದ ಅಧ್ಯಕ್ಷ ಡಾ. ಮಹಮದ ಸೊಕರ್ನೋ ಅವರು ತಕ್ಷಣ ಕ್ರಿಯಾಸಕ್ತರಾದರು. ಅವರು ಒಡನೆ ಅಧಿಕಾರವನ್ನೆಲ್ಲ ತಮ್ಮ ಕೈಗೆ ತೆಗೆದುಕೊಂಡರು. ಇವರನ್ನು ಅಪಹರಿಸಿಕೊಂಡೊಯ್ದ ಅನುಮಾನದಿಂದ ಕಮ್ಯುನಿಸ್ಟ ಧುರೀಣನೊಬ್ಬನನ್ನೂ ಹಿಂದಿನ ವಿದೇಶ ಮಂತ್ರಿಯಾದ ಡಾ. ಸೊಯಬರ್ಜೋನನನ್ನೂ ಬಂಧಿಸಲಾಯಿತು. ರಾಷ್ಟ್ರದಲ್ಲೆಲ್ಲ ಅಧ್ಯಕ್ಷರು ದಂಡಿನ ಕಾಯದೆಯನ್ನು ಸಾರಿದರು.

ಇದರಲ್ಲಿ ಡಚ್ ಕೈವಾಡವನ್ನೂ ಶಂಕಿಸಲಾಗಿತ್ತು— ಈಚೆಗೆ ಡಚ್—ಇಂಡೋನೇಶಿಯನ್ ಮಾತುಕತೆ ಅಷ್ಟು ಸುಖಕರವಾಗಿ ಸಾಗಿದ್ದಿಲ್ಲ.

ಆದರೆ ಎಲ್ಲವೂ ನಗೆಗಡಲಿನಲ್ಲಿ ಕೊನೆಗೊಂಡಿತು. ೭೫ ತಾಸುಗಳವರೆಗೆ ಅವರನ್ನು ಸೊಯಕಾರ್ತಾದಿಂದ ೩೦ ಮೈಲು ದೂರದ ಅರಮನೆಯೊಂದರಲ್ಲಿ ಬಂಧಿಸಿಟ್ಟ ನಂತರ ಅವರ ಅಪಹಾರಕರು ಅವರನ್ನು ಮರಳಿ ತಂದುಬಿಟ್ಟರು. ಇಡಿ ಘಟನೆಯೆ ಒಂದು ತಪ್ಪು ತಿಳವಳಿಕೆಯಿಂದ ಆಗಿತ್ತಂತೆ. ಯಾರೋ ಡಚ್ ಅಧಿಕಾರಿಯೆಂದು ತಿಳಿದು ಅವರ ಅಪಹಾರಕರು ಅವರನ್ನು ಬಂಧಿಸಿದ್ದರಂತೆ. ಅಂತೂ ಅಪಹಾರಕರ ವಿವರಣೆ ಅದಾಗಿತ್ತು. ಆದರೆ ಅವರೆಲ್ಲ ಕಿಡಿಗೇಡಿಗಳೆಂದು ಶಹರೀರರು ಹೇಳುತ್ತಾರೆ. ಅವರ ಬಂಧನಕ್ಕೆ ಆಜ್ಞೆ, ಕೊಟ್ಟವರು ಕೇಂದ್ರ ಇಂಡೋನೇಶಿಯನ್ ಸರಕಾರದವರೇ ಎಂದು ಕಿಡಿಗೇಡಿಗಳ ಹೇಳಿಕೆಯಂತೆ ಇದೆಲ್ಲರ ವಿಚಾರಣೆ ನಡೆದಿದೆ.

* * *

ಚೀನದಲ್ಲಿ ಅನಿಯಮಿತ ಅವಧಿಯ ವರೆಗೆ ಅಂತರ್ಯುದ್ಧ ನಿಲ್ಲಿಸಲ್ಪಟ್ಟಿದೆ. ಅಮೇರಿಕೆಗೆ ಜನರಲ್ ಮಾರ್ಶಲ್ಲರು ಕಮ್ಯುನಿಸ್ಟ—ಕೌಮಿನಟಾಂಗ ನಡುವೆ ಸಂಧಾನ ನಡೆಸಿದ್ದಾರೆ.

## ಹಿಂದೀ ಸಂರಕ್ಷಣ ಬಲಗಳ ಭೂತ—ಭವಿಶವ್ಯ

[ಮೊದಲನೆ ಪುಟದಿಂದ]

ಬಹುದಾದ ಯಾವುದೇ ರಾಷ್ಟ್ರೀಯ ಆದರ್ಶವಿಲ್ಲದಿದ್ದುದನ್ನು ನೋಡಿದರೆ ಆಗ ಹಿಂದೀ ಸೈನಿಕರು ಮಾಡಿತೋರಿಸಿದ ಉಜ್ವಲ ಕೃತಿಗಳು ಇನ್ನಷ್ಟು ಅಭಿನಂದನೀಯವೆನಿಸದಿರವು.

ಯುದ್ಧಾನಂತರ ಹಿಂದೀ ಸೈನ್ಯದ ಸಂಘಟನೆಯಲ್ಲಿ ಕೆಲವೊಂದು ಬದಲಾವಣೆಯನ್ನು ತಂದೊಡ್ಡಲಾಯಿತು. ಆದರೆ ಬ್ರಿಟಿಶ ಭಾಗ್ಯವಿಧಾತರ ಮನಸಿನಲ್ಲಿ ಹುದುಗಿದ್ದ ಭೀತಿ ಹಾಗೆಯೆ ಉಳಿದಿತ್ತು. ಆದುದರಿಂದ ಹಿಂದೀ ಸೈನ್ಯವನ್ನು ತೋಫುಬಲದ ವಿಷಯದಲ್ಲಿ ದುರ್ಬಲವಾಗಿಯೆ ಇರಿಸಿದ್ದಲ್ಲದೆ ಎಲ್ಲ ತಾಂತ್ರಿಕ ಖಾತೆಗಳಲ್ಲಿ ಬ್ರಿಟಿಶ ಜನರನ್ನೇ ನೇಮಿಸಿಕೊಳ್ಳುತ್ತಿದ್ದರು.

೧೯೧೮ ರಲ್ಲಿ ಹಿಂದೀಯರಿಗೆ ಮೊದಲನೆ ಬಾರಿ ಕಿಂಗ್ಸ ಕಮೀಶನ್ಡ ಹುದ್ದೆಗಳನ್ನು ಕೊಡಲಾಯಿತು. ಹಿಂದೀಯರನ್ನು ಸೈನ್ಯದಲ್ಲಿ ಹೊಣೆಗಾರ ಸ್ಥಾನಗಳಿಗೆ ನೇಮಿಸಬಾರದೆಂದಿದ್ದ ಹಳೆಯ ಸಂಪ್ರದಾಯವನ್ನು ಮುರಿಡುದಕ್ಕೆ ಬ್ರಿಟಿಶ ಪ್ರತಿಗಾಮಿಗಳು ಪ್ರತಿಭಟಿಸಿದರೂ ಹಿಂದೀ "ಕ್ಷತ್ರಿಯ ಜಾತಿಗಳು" ಎಂದು ಕರೆಸಿಕೊಳ್ಳುವ ವರ್ಗಗಳನ್ನು ಸಂತುಷ್ಟಗೊಳಿಸುವಗೋಸುಗ ಇದನ್ನು ಮಾಡಲಾಗಿತ್ತು. ಈ ಧೋರಣೆಯನ್ನೇ ಮುಂದುವರಿಸಿ ಕೆಲ ಹಿಂದೀ ಜಂಟಲಮನ್ನಾನ ಕ್ಯಾಡೆಟ್ಟರನ್ನು ಸ್ಯಾಂಡಹರ್ಸ್ಟ ಮತ್ತು ವೂಲವಿಚಗಳಿಗೆ ಕಳಿಸಿ ತರಬೇತಿ ಕೊಡಿಸಿದ್ದಾಯಿತು. ಅಲ್ಲಿ ತರಬೇತಿ ಹೊಂದಿದ ಕೆಲವರನ್ನು ವಿಶಿಷ್ಟ ಸೈನ್ಯ ತುಕಡಿಗಳಲ್ಲಿ ಅಧಿಕಾರ ಸ್ಥಾನಗಳಿಗೆ ನೇಮಿಸಲಾಯಿತು. ಆದರೆ ಯಾವುದೇ ಸಂದರ್ಭದಲ್ಲಿ ಹಿಂದೀ ಅಧಿಕಾರಿಯ ಕೈಕೆಳಗೆ ಬ್ರಿಟಿಶನೊಬ್ಬನು ಕೆಲಸ ಮಾಡುವ ಪ್ರಸಂಗ ಬಾರದಂತೆ ಅವರನ್ನು ಕೆಲವೊಂದು ನಿರ್ದಿಷ್ಟ ಭಾಗಗಳಲ್ಲಿ ಮಾತ್ರ ನೇಮಿಸುತಿದ್ದರು ಈ ಪ್ರತ್ಯೇಕೀಕರಣ ಧೋರಣೆಯಿಂದ ಹಿಂದೀಯರಲ್ಲಿ ದ್ವೇಷ ಬೆಳೆಯಿತು.

ಈ ಹಿಂದೀಕರಣ ಯೋಜನೆ ಬ್ರಿಟಿಶರಿಗೆ ಬಹಳ ಅಪಥ್ಯವಾಗಿತ್ತು. ಹಿಂದೀ ಸೈನ್ಯ ತಮ್ಮ ವಿಶೇಷ ಗುತ್ತಿಗೆಯೆಂದು ಅವರು ಭಾವಿಸುತ್ತಿದ್ದರು. ಸಾಮಾನ್ಯ ಬ್ರಿಟಿಶನು ಈ ಬಗ್ಗೆ ಏನು ಭಾವಿಸುತ್ತಿದ್ದನೆಂಬುದು ಲಾರ್ಡ ರೋಬರ್ಟ್ಸರ ಈ ಕೆಳಗಿನ ಮಾತುಗಳಿಂದ ವ್ಯಕ್ತವಾಗಬಹುದು.

"ಯುರೋಪಿಯನ್ನನಲ್ಲಿ ನೈಸರ್ಗಿಕವಾಗಿರುವ ತನ್ನ ಮೇಲ್ಮೆಯ ಅರಿವೇ ನಮಗೆ ಹಿಂದುಸ್ತಾನವನ್ನು ದೊರಕಿಸಿ ಕೊಟ್ಟಿತು. ಹಿಂದೀಯನೊಬ್ಬನು ಎಷ್ಟೇ ಸುಶಿಕ್ಷಿತನೂ ಬುದ್ಧಿವಂತನೂ ಆಗಿರಬಹುದಾದರೂ ತಾನೆಷ್ಟೇ ಶೂರನೆಂದು ತೋರಿಸಿಕೊಟ್ಟಿರಬಹುದಾದರೂ ನಾವು ಅವನಿಗೆ ಯಾವುದೇ ಸ್ಥಾನಮಾನ ಕೊಟ್ಟರೂ ಬ್ರಿಟಿಶ ಅಧಿಕಾರಿಯೊಬ್ಬನು ಅವನನ್ನು ತನ್ನ ಸಮಾನಿಕನೆಂದು ಎಣಿಸಲಾರನು; ಮತ್ತು ಅತಿ ಕಿರಿಯ ಬ್ರಿಟಿಶ ಸೈನಿಕನಾದರೂ ಅವನನ್ನು ತನಗಿಂತ ಮೇಲಿನವನೆಂದು ಒಪ್ಪಲಾರನು."

### ಅವಮಾನಕರ ನಡತೆ

ಅಂದಿನ ಹಿಂದೀ ಅಧಿಕಾರಿಗಳು ಅನೇಕ ತರದ ಅವಮಾನಗಳಿಗೆ ಗುರಿ ಮಾಡಲ್ಪಡುತಿದ್ದರು. ಅವರ ಊಟದ ಮನೆಗಳಲ್ಲಿ ಅವರನ್ನು ಜಾತಿಗೆಟ್ಟವರಂತೆ ನಡೆಸಿಕೊಳ್ಳುತಿದ್ದರು. ಬಡತಿ ವಿಷಯದಲ್ಲಿ ಅವರ ಹಕ್ಕುಗಳನ್ನು ಉಪೇಕ್ಷಿಸುತಿದ್ದರು. ಒಟ್ಟಿನ ಮೇಲೆ ಸೈನ್ಯದಲ್ಲಿ ಅವರು ಕರೆಯದೆ ಬಂದವರೇನೋ ಎನ್ನುವಂತೆ ನಡೆಸಿಕೊಳ್ಳುವದಾಗಿತ್ತು. ಆದರೂ ಪ್ರಯತ್ನಶೀಲತೆ, ಕೌಶಲ, ಶೌರ್ಯಗಳಿಂದ ಅವರು ತಮ್ಮ ಹೆಸರು ಬೆಳಗಿಸಿಕೊಂಡದ್ದಲ್ಲದೆ ತಮ್ಮ ಕೈಕೆಳಗಿನ ಜನರ ಪ್ರೀತಿಗೌರವಗಳನ್ನು ಸಂಪಾದಿಸಿದರು. ಇದು ಬ್ರಿಟಿಶರಿಗೆ ಸಹನೆಯಾಗಲಿಲ್ಲ. ಅದ್ದರಿಂದ ಅವರು ತಮ್ಮ ಸ್ವಾರ್ಥಕ್ಕಾಗಿಯೆ ಹಿಂದೀ ಕಮೀಶನ್ಡ ಅಧಿಕಾರಿಗಳೆಂಬ ಹೊಸ ವರ್ಗವೊಂದನ್ನು ಸ್ಥಾಪಿಸಿದರು. ಜನತೆಯ ಒತ್ತಾಯ ಹೆಚ್ಚಿದ್ದರಿಂದ ವರ್ಷಕ್ಕೆ ೬೦ ಅಧಿಕಾರಿಗಳಿಗೆ ತರಬೇತಿ ಕೊಡುವ ಸೈನಿಕ ವಿದ್ಯಾಲಯವೊಂದನ್ನು ಡೆಹರಾಡೂನದಲ್ಲಿ ತೆರೆದರು (೧೯೩೨). ಆದರೆ ಇಲ್ಲಿ ತರಬೇತಿ ಹೊಂದಿದ ಅಧಿಕಾರಿಗಳನ್ನು ಬ್ರಿಟಿಶ ಅಧಿಕಾರಿಗಳ ಸ್ಥಾನದಲ್ಲಿ ಹೆಚ್ಚಾಗಿ ನೇಮಿಸದೆ ವಾಯಿಸರಾಯ ಕಮೀಶನ್ಡ ಅಧಿಕಾರಿಗಳನ್ನು ಕಿತ್ತುಹಾಕಿ ಅವರ ಸ್ಥಾನದಲ್ಲಿ ನೇಮಿಸತೊಡಗಿದ್ದರಿಂದ ಸೈನ್ಯದ ಹಿಂದೀಕರಣ ಎಲ್ಲಿತ್ತೊ ಅಲ್ಲೇ ಉಳಿದುಬಿಟ್ಟಿತು. ಅದಲ್ಲದೆ ವಾಯಿಸರಾಯ ಕಮೀಶನ್ಡ ತರಗತಿಗೆ ತಮ್ಮ ಬಡತಿಯಾಗುವದು ಸಂಶಯವೆಂದು ಸಾಮಾನ್ಯ ಸೈನಿಕರ ಮನಸ್ಸಿಗೆ ಹೊಳೆಯುವಂತೆ ಮಾಡಿ ಅವರನ್ನು ನಿರುತ್ಸಾಹಿತರಾಗಿ ಮಾಡುವದಾಯಿತು.

ಹಿಂದೀ ಕಮೀಶನ್ಡ ಅಧಿಕಾರಿಗಳಿಗೆ ದೊರೆತ ನಡೆವಳಿಕೆ ಅವರ ಹಿಂದಿದ್ದ ಹಿಂದೀ ಕಿಂಗ್ಸ ಕಮೀಶನ್ಡ ಅಧಿಕಾರಿಗಳಿಗಿಂತಲೂ ಕಡಮೆಯದಾಗಿತ್ತು. ಅವರ ಸಂಬಳ ಕಡಿಮೆಯಾಗಿದ್ದುದಿಷ್ಟೇ ಅಲ್ಲ, ಹಿಂದೀ-ಬ್ರಿಟಿಶ ಸಂಮಿಶ್ರ ಸೈನ್ಯ ತುಕುಡಿಗಳಲ್ಲಿ ಅವರಿಗೆ ಆಜ್ಞಾಪಕ ಅಧಿಕಾರಗಳು ಸಿಗುತಿದ್ದಿಲ್ಲ. ಬಿಳಿ ಸೈನಿಕರಿಗೆ ಶಿಕ್ಷೆ ವಿಧಿಸಲು ಅವರಿಗೆ ಹಕ್ಕಿದ್ದಿಲ್ಲ. ರಾಜಕೀಯ ಖಾತೆಯಲ್ಲಿ ಅವರಿಗೆ ಪ್ರವೇಶ ಬಹಿಷ್ಕೃತವಾಗಿತ್ತು. ಹೀಗಿದ್ದರೂ ಅವರು ತಮ್ಮ ಬ್ರಿಟಿಶ ಸಮಾಖಿಕರಿಗಿಂತ ಎಲ್ಲ ವಿಧದಲ್ಲಿಯೂ ಉತ್ತಮರೆಂದು ಸಿದ್ಧಮಾಡಿ ತೋರಿಸಿದರು. ಆದರೆ ೧೯೩೯ ರಲ್ಲಿ ಯುದ್ಧಾರಂಭವಾಗುವವರೆಗೂ ಅವರ ಪರಿಸ್ಥಿತಿಯನ್ನು ಸುಧಾರಿಸುವ ಪ್ರಯತ್ನವಾವುದೂ ನಡೆಯಲಿಲ್ಲ.

# ಕಾಂಗ್ರೆಸ ಮಂತ್ರಿಗಳಿಂದ ಏಕೀಕರಣಕ್ಕೆ ಆಗಬೇಕಾದ ಸಹಾಯಗಳು

## ಏಕೀಕರಣ ಸಂಘದ ಬಹುಮುಖ ಸೂಚನೆ

### " ಅಂತರಾಳ ಏಕೀಕರಣ ಬೇಡ "

ಹಿಂದುಸ್ತಾನದ ಸ್ವಾತಂತ್ರ್ಯ ಸಮೀಪವಾಗಿರುವ ಈ ಸಂಧಿಯಲ್ಲಿ ಕರ್ನಾಟಕ ಏಕೀಕರಣವನ್ನು ಸಾಧಿಸಿಕೊಳ್ಳಲು ಕನ್ನಡಿಗರು ಪ್ರಯತ್ನಿಸಬೇಕಾದ್ದು ಅತ್ಯವಶ್ಯಕ. ಭಾಷಾವಾರ ಪ್ರಾಂತರಚನೆಗೆ ಬದ್ಧವಾಗಿರುವ ಕಾಂಗ್ರೆಸ ಮಂತ್ರಿಮಂಡಲಗಳು ಮದ್ರಾಸ, ಮುಂಬಯಿಗಳಲ್ಲಿ ಸ್ಥಾಪಿತವಾಗಿರುವದರಿಂದ ಕರ್ನಾಟಕ ಏಕೀಕರಣದ ಪೂರ್ವಸಿದ್ಧತೆಯನ್ನು ಅವುಗಳ ಸಹಾಯದಿಂದ ಮಾಡಿಕೊಳ್ಳಬಹುದಾಗಿದೆ. ಈಗಿಗೂ ಹಿಂದುಸ್ತಾನದ ರಾಜ್ಯಘಟನೆ ರಚಿತವಾಗಿ ಅಂಗೀಕೃತವಾಗುವ ಸಮಯ.ಕ್ಕೂ ಮಧ್ಯಕಾಲದಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಹೇಗೆ ಏಕೀಕರಣಕ್ಕೆ ಸಹಾಯ ಮಾಡಬಲ್ಲವೆಂಬುದನ್ನು ಕೂಲಂಕಷವಾಗಿ ವಿಚಾರಿಸಿ ಅಖಿಲ ಕರ್ನಾಟಕ ಏಕೀಕರಣ ಸಂಘದವರು "ಕಾಂಗ್ರೆಸ ಮಂತ್ರಿಮಂಡಲವೂ ಏಕೀಕರಣದ ಪೂರ್ವಸಿದ್ಧತೆಯೂ" ಎಂಬ ಒಂದು ಪುಸ್ತಿಕೆಯನ್ನು ಹೊರಡಿಸಿದ್ದಾರೆ. ಅದರ ಮುಖ್ಯಾಂಶವನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಮೊಟ್ಟಮೊದಲು ಈ ಪುಸ್ತಿಕೆಯಲ್ಲಿ, ಪ್ರತ್ಯೇಕ ಪ್ರಾಂತೀಕರಣ ಪ್ರಾಂತಿಕ ಸರಕಾರಗಳ ಅಧಿಕಾರ ವ್ಯಾಪ್ತಿಗೆ ಹೊರಗಿನ ಮಾತಾಗಿರುವದರಿಂದ ಮದ್ರಾಸ ಇಲಾಖೆಯ ಕನ್ನಡ ಪ್ರದೇಶಗಳನ್ನು ಮುಂಬಯಿಗೆ ಸೇರಿಸಿ ಅರ್ಧ ಏಕೀಕರಣವನ್ನಾದರೂ ಒಡನೆ ಸಾಧಿಸಿಕೊಳ್ಳಬೇಕೆನ್ನುವವರ ವಾದವನ್ನು ತಿರಸ್ಕರಿಸಿದೆ. ಈ "ಅಂತರಾಳ ಏಕೀಕರಣ" ೧೯೩೫ ರ ಘಟನೆಯಂತೆ ಪಾರ್ಲಮೆಂಟಿನ ಸಮ್ಮತಿ ಬೇಕಾಗುವದರಿಂದ ಪೂರ್ಣ ಏಕೀಕರಣದಷ್ಟೇ ಅದು ಶ್ರಮಾವಹವೂ ವಿಲಂಬಿತವೂ ಆದ ಕಾರ್ಯವಾದುದರಿಂದ "ಪ್ರತ್ಯೇಕ ಪ್ರಾಂತ ನಿರ್ಮಾಣದಲ್ಲಿಯೆ ಕರ್ನಾಟಕದ ಜನತೆಯೆಲ್ಲ ತತ್ಪರವಾಗುವದು ಅವಶ್ಯವೂ ಶ್ರೇಯಸ್ಕರವೂ" ಎಂದು ಅದು ಪ್ರತಿಪಾದಿಸುತ್ತದೆ. ಕೇಂದ್ರ ಸರಕಾರದ ಸೂತ್ರಗಳು ಹಿಂದೀ ಜನರ ಕೈಯಲ್ಲಿ ಬಂದೊಡನೆ ಭಾಷಾನ್ವಯ ಪ್ರಾಂತರಚನೆ ಕೃತಿಯಲ್ಲಿ ಬರುವದೆಂದು ೧೯೩೮ ರಲ್ಲಿ ಕಾಂಗ್ರೆಸ ವರ್ಕಿಂಗ ಕಮೀಟಿಯವರು ತೀರ್ಮಾನಿಸಿರುವದರಿಂದ ಮತ್ತು ಆ ಕಾಲ ಈಗ ಸಮೀಪಿಸಿರುವದರಿಂದ ಇನ್ನೂ ಕೆಲ ದಿನ ನಿರೀಕ್ಷಿಸೋಣವೆಂದು ಸಂಘದ ಹೇಳಿಕೆ.

### ಮುಂಬಯಿ ಸರಕಾರ ಏನು ಮಾಡಬಲ್ಲದು ?

ಈ ನಡುವೆ ಕಾಂಗ್ರೆಸ ಮಂತ್ರಿಮಂಡಲಗಳಿಂದ ಏಕೀಕರಣದ ಪೂರ್ವಸಿದ್ಧತೆಗೆ ಯಾವ ಯಾವ ಸಹಾಯಗಳನ್ನು ಪಡೆಯಬಹುದೆಂದು ನಾಲ್ಕು ವಿಭಾಗಗಳಲ್ಲಿ ಸಂಘದ ಪುಸ್ತಿಕೆ ವಿವರಿಸಿದೆ. (೧) ಮುಂಬಯಿ ಮಂತ್ರಿಗಳು, (೨) ಮದ್ರಾಸ ಮಂತ್ರಿಗಳು, (೩) ಉಭಯತರು ಸೇರಿ, ಮತ್ತು (೪) ಕೇಂದ್ರ ಸರಕಾರದವರು ಏಕೀಕರಣಕ್ಕೆ ಹೇಗೆ ಸಹಾಯ ಕೊಡಬಲ್ಲರೆಂಬುದು ಉಲ್ಲೇಖಿಸಲ್ಪಟ್ಟಿದೆ.

೨೩ ಅವಾಂತರಗಳಲ್ಲಿ ಮುಂಬಯಿಮಂತ್ರಿಮಂಡಲದಿಂದಾಗಬಲ್ಲ ಕಾರ್ಯಗಳನ್ನು ಚರ್ಚಿಸಲಾಗಿದೆ. ಆಡಳಿತೆಯ ವಿಷಯದಲ್ಲಿ, ದಕ್ಷಿಣ ಭಾಗದ ಪುನರ್ಘಟನೆಯನ್ನು ಮೊದಲು ಉಲ್ಲೇಖಿಸಿದೆ. ಕುಲಾಬಾ, ರತ್ನಾಗಿರಿ ಜಿಲ್ಲೆಗಳನ್ನು ದಕ್ಷಿಣ ಭಾಗದಿಂದ ಬೇರ್ಪಡಿಸಿ ಸೊಲ್ಲಾಪುರ ಜಿಲ್ಲೆಯನ್ನು ದಕ್ಷಿಣ ಭಾಗದಲ್ಲಿ ಸೇರಿಸಬೇಕು. ಸೊಲ್ಲಾಪುರದ ಸಹಕಾರ, ಒಕ್ಕಲತನ, ಶಿಕ್ಷಣ, ಆರೋಗ್ಯ ಇತ್ಯಾದಿ ಖಾತೆಗಳು ಆಡಳಿತದ ಅನುಕೂಲತೆಗಾಗಿ ಈಗಾಗಲೆ ಕನ್ನಡ ಜಿಲ್ಲೆಗಳಿಗೆ ಜೋಡಿಸಲ್ಪಟ್ಟಿವೆ. ಮೇಲೆ ಹೇಳಿದ ಪುನರ್ಘಟನೆಯಿಂದ ಆಡಳಿತೆ ಇನ್ನೂ ಸುಗಮವಾಗುವದು. ಸೊಲ್ಲಾಪುರ ಹಾಗು ಸಾತಾರಾ ಜಿಲ್ಲೆಗಳಲ್ಲಿದ್ದ ಕನ್ನಡ ಹಳ್ಳಿಗಳನ್ನು ಪ್ರತ್ಯೇಕ ತಾಲೂಕು ಅಥವಾ ಮಹಾಲುಗಳಲ್ಲಿ ಸೇರ್ಪಡಿಸುವದು ಮತ್ತು ಅವುಗಳ ಸರಕಾರಿ ಲಿಖಿತಗಳೂ ವ್ಯವಹಾರಗಳೂ ಕನ್ನಡದಲ್ಲಾಗುವಂತೆ ಏರ್ಪಡಿಸುವದು ಇನ್ನೊಂದು ಸೂಚನೆ. ಸೊಲ್ಲಾಪುರ ನಗರದಲ್ಲಿ ಕನ್ನಡ ಮರಾಠಿಗಳೆರಡೂ ನಡೆಯುತಿರುವದರಿಂದ ಅಲ್ಲಿಯ ಕೋರ್ಟುಗಳಲ್ಲೂ ಎರಡಕ್ಕೂ ಮನ್ನಣೆ ಬೇಡಲಾಗಿದೆ. ಪ್ರಾಂತಿಕ ಸರಕಾರದಿಂದ ಮನ್ನಿಸಲ್ಪಟ್ಟ ಭಾಷೆಯಲ್ಲಿಯೇ ಆಯಾ ಜಿಲ್ಲೆಯ ಎಲ್ಲ ಸರಕಾರಿ ಖಾತೆಗಳು ತಮ್ಮ ನಿತ್ಯವ್ಯವಹಾರ ನಡೆಸುವಂತೆ ವಿಧಿಸಬೇಕೆಂದು ಪ್ರಾಂತಿಕ ಸರಕಾರಕ್ಕೆ ಕೇಳಿಕೊಳ್ಳಲಾಗಿದೆ. ವ್ಯಾಕರಣ ದೋಷಮಯವಾದ ನಮೂನೆಗಳ ತಿದ್ದುಪಡಿಯಾಗಬೇಕು, ವರ್ತಕರು ಆಯಾ ಜಿಲ್ಲೆಯ ಮನ್ನಣೆವೆತ್ತ ಭಾಷೆಯಲ್ಲಿಯೆ ಲೆಕ್ಕಪತ್ರ ಇರಿಸತಕ್ಕದ್ದೆಂದು ವಿಧಿಸಬೇಕು ಎಂದು ಈ ಸಂಬಂಧದಲ್ಲಿ ಸೂಚಿಸಿದೆ. ಇದಲ್ಲದೆ ಹಾಯಕೋರ್ಟ ಕಾರ್ಯಕ್ಕೆ ಕನ್ನಡಿಗರು ದೂರ ಮುಂಬಯಿಗೆ ಹೋಗಬೇಕಾಗಿ ಬರುವದನ್ನು ತಪ್ಪಿಸಲು ಸಿಂಧದಂತೆ ಕರ್ನಾಟಕದಲ್ಲಿಯು "ಜುಡೀಸಿಯಲ್ ಕಮೀಶನರ ಕೋರ್ಟನ್ನು ಸ್ಥಾಪಿಸಬೇಕು ಇಲ್ಲವೆ "ಸರ್ಕೀಟ ಹಾಯಕೋರ್ಟ" ಪದ್ಧತಿ ತರಬೇಕು.

### ಶೈಕ್ಷಣಿಕ ಕಾರ್ಯಗಳು

ಶೈಕ್ಷಣಿಕ ಸಂಬಂಧದಲ್ಲಿ ಸಂಘದ ಸೂಚನೆಗಳು ಕೆಳಗಿನಂತಿವೆ. ಕರ್ನಾಟಕಕ್ಕೆ ಪ್ರಾದೇಶಿಕ ವಿಶ್ವವಿದ್ಯಾಲಯವನ್ನು ಗುಜರಾಥ ಮಹಾರಾಷ್ಟ್ರ ವಿದ್ಯಾಲಯಗಳೊಡನೆ ಏಕಕಾಲದಲ್ಲಿ ಸ್ಥಾಪಿಸಬೇಕು. ಈ ಸಂಬಂಧದಲ್ಲಿ ೧೯೨೪ ರಲ್ಲೆ ಮುಂಬಯಿ ವಿಶ್ವವಿದ್ಯಾಲಯ ಗೊತ್ತುವಳಿ ಮಾಡಿತ್ತು. ಮುಖ್ಯಮಂತ್ರಿ ಖೇರರೂ ಮೊನ್ನೆ ಮೊನ್ನೆ ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. ಇದು ಕಾರ್ಯಕಾರಿಯಾಗುವ ವರೆಗೆ ಮುಂಬಯಿ ವಿಶ್ವವಿದ್ಯಾಲಯದ ಈಗಿನ ಘಟನೆಯಂತೆ ಪದವೀಧರರ ಆಯ್ಕೆಯಲ್ಲಿ ಸಿನೇಟಿಗೆ ಕನ್ನಡಿಗರು ಆರಿಸಿ ಬರುವದು ಕಠಿನವಾಗಿರುವದರಿಂದ ಮುನಸಿಪಲ್ ಮತ್ತು ಲೋಕಲ್ ಬೋರ್ಡುಗಳನ್ನು ಪ್ರಾದೇಶಿಕ ಗುಂಪುಗಳಾಗಿ ಮಾಡಿ ಸಿನೇಟಿಗೆ ಪದವೀಧರರನ್ನು ಆರಿಸಿ ಕಳಿಸುವಂತೆ ಪದವೀಧರರು ನೇರವಾಗಿ ಆಯ್ದು ಕಳಿಸುವ ೨೫ ಪ್ರತಿನಿಧಿಗಳನ್ನೂ ಕರ್ನಾಟಕ, ಗುಜರಾಥ, ಮಹಾರಾಷ್ಟ್ರ ಮತ್ತು ಮುಂಬೈಗೆ ಹಂಚಿಹಾಕಬೇಕು. ಈಗಿರುವ ಮೆಡಿಕಲ್, ಎಂಜಿನಿಯರಿಂಗ, ಅಗ್ರಿಕಲ್ಚರಲ್, ಕಮರ್ಶಿಯಲ್, ಫಾರೆಸ್ಟ, ಟೆಕ್ನಿಕಲ್ ಮತ್ತು ಆಯುರ್ವೇದೀಯ ಕಾಲೇಜುಗಳಲ್ಲಿ ಕನ್ನಡಿಗರಿಗೆ ಸುಲಭವಾಗಿ ಪ್ರವೇಶ ದೊರೆಯದಿರುವದರಿಂದ ಕರ್ನಾಟಕಕ್ಕಾಗಿಯೆ ಅಂಥ ಕಾಲೇಜುಗಳನ್ನು ಸ್ಥಾಪಿಸುವದವಶ್ಯ. ಧಾರವಾಡದಲ್ಲಿದ್ದ "ಕನ್ನಡ ರಿಸರ್ಚ" ಸಂಸ್ಥೆಗೆ ಜೋಡಿಸಿ ಕರ್ನಾಟಕಕ್ಕಾಗಿಯೆ ಪ್ರತ್ಯೇಕ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಬೇಕೆಂದು ಈಗಾಗಲೆ ಸಿದ್ಧವಾಗಿರುವ ಯೋಜನೆಯನ್ನು ಕೃತಿಯಲ್ಲಿ ತರುವದಲ್ಲದೆ ಮುಂಬಯಿಯ "ಪ್ರಿನ್ಸ ಅಫ ವೇಲ್ಸ ಮ್ಯುಜಿಯಮ"ದಲ್ಲಿರುವ ಕರ್ನಾಟಕದ ಪ್ರಾಚೀನ ವಸ್ತುಗಳು ಶಿಲಾಲೇಖಗಳು ಈ ಸಂಗ್ರಹಾಲಯಕ್ಕೆ ಸೇರಬೇಕು. ಇದಲ್ಲದೆ ಹಿಂದೆ ಇನಾಮು, ಜಹಾಗಿರುಗಳ ಸಂಬಂಧದಲ್ಲಿ ಸರಕಾರ ಕಲೆಹಾಕಿ ಪುಣೆಯಲ್ಲಿರಿಸಿದ್ದ ರಿಕಾರ್ಡುಗಳಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟವುಗಳನ್ನು ಕನ್ನಡ ರಿಸರ್ಚ ಸಂಸ್ಥೆಗೆ ಒಪ್ಪಿಸಬೇಕು

### ಉದ್ಯೋಗ ವ್ಯವಸಾಯ

ಉದ್ಯೋಗ ವ್ಯವಸಾಯಗಳ ಬಗ್ಗೆಯೂ ಸಂಘದವರು ಹಲವು ಸೂಚನೆಗಳನ್ನು ಮಾಡಿದ್ದಾರೆ. ಕಾರವಾರದಲ್ಲಿ ಹಡಗ ಕಟ್ಟುವ ತಾಣ ಮತ್ತು ಬಂದರವನ್ನು ಸ್ಥಾಪಿಸುವ ಆವಶ್ಯಕತೆ ಇದರಲ್ಲಿ ಮೊದಲನೆಯದು. ೧೯೧೭ ರಲ್ಲಿ ಮುಂಬಯಿ ಸರಕಾರದವರು ವಿಚಾರಣೆ ನಡೆಸಿ ಕಾರವಾರದಲ್ಲಿ ಹಡಗ ಕಟ್ಟುವ ತಾಣ ಪ್ರಾರಂಭಿಸಲು ನಿರ್ಧರಿಸಿದ್ದರೂ ಮುಂದೆ ೧೯೧೮ ರಲ್ಲಿ ಯುದ್ಧ ನಿಂತಮೇಲೆ ಈ ಯೋಜನೆ ಉಳಿದುಹೋಯಿತು. ಅನಂತರ ಶೋಧಿಸಲ್ಪಟ್ಟ ವಿಶಾಖಪಟ್ಟಣದ ಯೋಜನೆ ಕಾರ್ಯಕ್ಕಿಳಿಸಲ್ಪಟ್ಟಿದೆ. ಕರ್ನಾಟಕದ ಅರ್ಥಿಕಾಭಿವೃದ್ಧಿ ಯೋಜನೆಗಳು ಹಿಂದೂಡಲ್ಪಡುವವೆಂಬುದಕ್ಕೆ ಇದೇ ಪ್ರಮಾಣ. ಇದಲ್ಲದೆ ಕಾರವಾರವು ನೈಸರ್ಗಿಕವಾಗಿ ಬಂದರು ಕಟ್ಟಲು ಯೋಗ್ಯವೆಂದು ಸಿದ್ಧವಾಗಿದೆ. ಈ ಎರಡೂ ಯೋಜನೆಗಳು ಒಡನೆ ಜಾರಿಗೆ ಬರಬೇಕು.

ಕಾರವಾರ ಜಿಲ್ಲೆಯ ಕಾನನಗಳಿಂದ ಎಷ್ಟೋ ಬಗೆಯ ಹೊಸ ವ್ಯವಸಾಯಗಳನ್ನು ಪ್ರಾರಂಭಿಸಲು ಅವಕಾಶವಿದೆ. ಅವುಗಳನ್ನು ಸರಕಾರ ಗಮನಿಸಬೇಕು. ಗೆರಸೊಪ್ಪೆಯ ತದಸಲ ಮುತ್ತು ಇನ್ನಿತರ ಕರ್ನಾಟಕ ಜಲಪಾತಗಳಿಂದ ವಿದ್ಯುಚ್ಛಕ್ತಿಯನ್ನು ಕರ್ನಾಟಕದ ಪಟ್ಟಣಗಳಿಗೂ ಉದ್ಯೋಗಗಳಿಗೂ ರೇಲ್ವೆಯವರಿಗೂ ಪೂರೈಸಬೇಕು. ಗೆರಸೊಪ್ಪೆ ಯೋಜನೆಯನ್ನು ಒಡನೆ ಕೈಕೊಳ್ಳಬೇಕು. ಮುಂಬಯಿ ಇಲಾಖೆಯಲ್ಲಿದ್ದ ಒಂದು ಲಕ್ಷ ಕೈಮಗ್ಗಗಳಲ್ಲಿ ಒಂದೈದಾಂಶ ಮಗ್ಗಗಳು ಇರುವ ವಿಜಾಪುರ ಜಿಲ್ಲೆಯಲ್ಲಿ ನೂಲಿನ ಕೊರತೆ ಬಹಳವಾಗಿ ಕೈಮಗ್ಗ ವ್ಯವಸಾಯಕ್ಕೆ ಧಕ್ಕೆ ತಗಲಿರುವದರಿಂದ ಬಾಗಲಕೋಟೆಯಲ್ಲಿ ಬರಿ ನೂಲು ಮಾತ್ರ ಪೂರೈಸುವ ಗಿರಣಿ ಸ್ಥಾಪಿಸಬೇಕು. ಬೆಳಗಾವಿ, ಧಾರವಾಡ ಜಿಲ್ಲೆಗಳ ಮಲೆನಾಡು ಪ್ರದೇಶಗಳಲ್ಲಿ ರೇಶ್ಮಿ ಹುಳಗಳನ್ನು ಗ್ರಾಮೋದ್ಯೋಗ ರೂಪದಲ್ಲಿ ಸಾಕುವದನ್ನು ಪ್ರಾರಂಭಿಸಬೇಕು. ಕಾರವಾರ ಜಿಲ್ಲೆಯ ಮತ್ತು ಗೋಕಾವಿಯ ಕಟ್ಟಿಗೆ, ಹಸ್ತಿದಂತ ಹಾಗು ಗಂಧದ ನಕ್ಷೆಯ ಅಪರೂಪ ವಸ್ತುಗಳಿಗೆ ವಿದೇಶಗಳಲ್ಲಿ ನಮ್ಮ ಹಾಯ ಕಮೀಶನರುಗಳ ಮೂಲಕ ಪೇಟೆ ದೊರಕಿಸಿ ಕೊಡಬೇಕು.

ಹುಬ್ಬಳ್ಳಿ- ಕಾರವಾರ, ನಿಪ್ಪಾಣಿ- ಇಳಕಲ್ಲ, ಗದಗ-ವಾಡಿ, ಕೊಟ್ಟೂರ-ಹರಿಹರ, ರಾಯದುರ್ಗ-ಚಿತ್ರದುರ್ಗ ಮೊದಲಾದ ಭಾಗಗಳಿಗೆ ರೇಲ್ವೆ ಹಾಕಲು ಕೇಂದ್ರ ಸರಕಾರವನ್ನು ಮುಂಬೈ ಸರಕಾರ ಒತ್ತಾಯಪಡಿಸಬೇಕು.

ಇದಲ್ಲದೆ ಕರ್ನಾಟಕ ಭಾಗದ ಸಂಸ್ಥಾನಗಳನ್ನೊಳಗೊಂಡು ಮುಂಬಯಿ ಕರ್ನಾಟಕದ ಬ್ರಿಟಿಶ ಜಿಲ್ಲೆಗಳ ಯುದ್ಧೋತ್ತರ ಯೋಜನೆ ಗೊತ್ತುಪಡಿಸಲು ಮುಂಬಯಿ ಸರಕಾರ ಗಮನಿಸಬೇಕಲ್ಲದೆ, ವಿಜಾಪುರ, ಬೆಳಗಾವಿ, ಧಾರವಾಡ ಜಿಲ್ಲೆಗಳ ಬರಗಾಲ ಪ್ರದೇಶಗಳಲ್ಲಿ ಬರಗಾಲ ನಿವಾರಣೆಗಾಗಿ ಅಧುನಿಕ ನೀರಾವರಿ ಹಾಗು ವ್ಯವಸಾಯ ಉಪಾಯಗಳನ್ನು ಬಳಕೆಯಲ್ಲಿ ತರಬೇಕೆಂದು ಪುಸ್ತಿಕೆ ಸೂಚಿಸುತ್ತದೆ.

ಇನ್ನು ಮುಂಬಯಿ ಬಾನುಲಿಯಲ್ಲಿ ಗುಜರಾಥ ಮಹಾರಾಷ್ಟ್ರಗಳ ಹಳ್ಳಿಗಳಿಗಾಗಿ ಕಾರ್ಯಕ್ರಮಗಳಿದ್ದರೂ ಕನ್ನಡಕ್ಕಿಲ್ಲದುದನ್ನೂ ಒಟ್ಟನಲ್ಲಿ ಕನ್ನಡ ಕಾರ್ಯಕ್ರಮಗಳೇ ಅಪರೂಪವಾಗಿರುವದನ್ನೂ ಟೀಕಿಸಿ ಈ ಅನ್ಯಾಯವನ್ನು ನಿರ್ಮೂಲ ಮಾಡಬೇಕೆಂದು ಕೇಳಿಕೊಳ್ಳಲಾಗಿದೆ.

ಕೊನೆಯದಾಗಿ, ೧೯೩೮ ರಲ್ಲಿ ಏಕೀಕರಣದ ಬಗ್ಗೆ ಮುಂಬಯಿ ಮಂತ್ರಿಮಂಡಲದವರು ಸಂಗ್ರಹಿಸಿದ ವರದಿಯನ್ನು ಪೂರ್ಣವಾಗಿ ಇಂಗ್ಲೀಷ ಕನ್ನಡ ಭಾಷೆಗಳಲ್ಲಿ ಪ್ರಕಟಿಸಬೇಕೆಂದೂ ಸಂಘದವರು ಒತ್ತಾಯಪಡಿಸಿದ್ದಾರೆ.

[ಶೇಷಾಂಶ ಮುಂದಿನ ವಾರ]

ಕರ್ಮವೀರ

# ಹರಿಜನ ಪುರವಣಿ

## ಅಟಂಬಾಂಬು ಮತ್ತು ಅಹಿಂಸೆ

ಬೇರೆ ಯಾವುದರಿಂದಲೂ ಸಾಧ್ಯವಾಗದಂಥ ಅಹಿಂಸೆಯನ್ನು ಅಟಂಬಾಂಬು ಸಾಧ್ಯಮಾಡಿಕೊಡಬಲ್ಲದೆಂದು ಅಮೇರಿಕೆಯ ಗೆಳೆಯರು ಪ್ರತಿಪಾದಿಸುವುದುಂಟು. ಅದರ ವಿನಾಶಕಶಕ್ತಿಯು ಜಗತ್ತನ್ನೆ ಪರಿವರ್ತಿಸಿ ಸದ್ಯದ ಮಟ್ಟಿಗೆ ಹಿಂಸೆಯಿಂದ ಅದನ್ನು ಪರಾವೃತ್ತಮಾಡಿದ್ದಾದರೆ ಮಾತ್ರ ಅದು ಹಾಗೆ ಮಾಡಬಲ್ಲದು. ಯಾವನೊಬ್ಬ ಮನುಷ್ಯನು ಓಕರಿಕೆ ಬರುವಷ್ಟು ರುಚಿಕರ ಪದಾರ್ಥಗಳನ್ನು ಹೊಟ್ಟೆತುಂಬ ತಿಂದು, ಓಕರಿಕೆ ನಿಂತ ಬಳಿಕ ದ್ವಿಗುಣಿತ ಉತ್ಸಾಹದಿಂದ ಮತ್ತೆ ಅವನ್ನು ಜಡೆಯುವುದಕ್ಕಾಗಿ ಅವುಗಳನ್ನು ಬಿಟ್ಟಂತೆಯೆ ಸ್ಯ. ಅದೇ ರೀತಿಯಾಗಿ ಸದ್ಯದ ಹೇಸಿಕೆಯ ಪರಿಣಾಮವಿಲ್ಲದಂತಾದ ಬಳಿಕ ಹೊಸ ಹುರುಪಿನಿಂದ ಜಗತ್ತು ಮತ್ತೆ ಹಿಂಸೆಗಿಳಿಸುವುದು.

ಅನೇಕ ಸಲ ಕೇಡಿನಿಂದ ಒಳಿತಾಗುವುದುಂಟು. ಆದರೆ ಅದು ಮಾನವ ಯೋಜನೆಯಲ್ಲ, ಪರಮಾತ್ಮನದು. ಕೇಡಿನಿಂದ ಕೆಡಕೆ ಆಗುವುದು ಒಳಿತಿನಿಂದ ಒಳಿತೇ ಆಗುವುದೆಂಬುದು ಮಾತ್ರ ಮನುಷ್ಯನಿಗೆ ಗೊತ್ತಿದೆ.

ಅಮೇರಿಕೆಯ ಶಾಸ್ತ್ರಜ್ಞರು ಮತ್ತು ಸೈನ್ಯಾಧಿಕಾರಿಗಳು ಅಟಂಶಕ್ತಿಯನ್ನು ವಿನಾಶಕಕಾರ್ಯಗಳಿಗಾಗಿ ವಿನಿಯೋಗಿಸಿದ್ದರೂ ಉಳಿದ ಶಾಸ್ತ್ರಜ್ಞರು ಮಾನವರ ಹಿತಕ್ಕಾಗಿ ಅದರ ಉಪಯೋಗ ಮಾಡುವದು ನಿಃಸಂದೇಹವಾಗಿ ಶಕ್ಯವಿರುವುದು. ಆದರೆ ಅಮೇರಿಕೆಯ ಗೆಳೆಯರು ಹೇಳುವುದರ ಅರ್ಥ ಹಾಗಿರುವುದಿಲ್ಲ. ಸುಸ್ಪಷ್ಟ ಸತ್ಯವನ್ನು ಪ್ರತಿಪಾದಿಸುವ ಇಂಥ ಪ್ರಶ್ನೆಗಳನ್ನು ಕೇಳುವಷ್ಟು ಅವರು ಸಾಧುಗಳಲ್ಲ. ಕೊಳ್ಳಿಗಾರನು ವಿನಾಶಕ ಮತ್ತು ದುಷ್ಟ ಉದ್ದೇಶಸಾಧನೆಗಾಗಿ ಬೆಂಕಿಯ ಉಪಯೋಗ ಮಾಡುತ್ತಾನೆ. ಮನೆಯ ಯಜಮಾನಿಯು ಮಾನವರ ಪೋಷಣೆಗೆ ಅವಶ್ಯವಾದ ಅನ್ನವನ್ನು ಮಾಡಲು ಬೆಂಕಿಯ ಉಪಯೋಗ ಮಾಡುವಳು.

ಯುಗಯುಗಾಂತರಗಳಿಂದ ಮಾನವನಲ್ಲಿದ್ದ ಅತ್ಯುಚ್ಚ ಭಾವನೆಗಳನ್ನು ಅಟಂಬಾಂಬು ನಿಷ್ಕ್ರಿಯ ಮಾಡಿಬಿಟ್ಟಿದೆಂದು ನನ್ನ ಮಟ್ಟಿಗೆ ಎನಿಸುತ್ತದೆ. ಯುದ್ಧದ ವಿಧಿಗಳೆಂದು ಕೆಲವು ನಿಯಮಗಳಿವೆಯಂತೆ. ಅವೇನೊ ಅಟಂಬಾಂಬುಗಳನ್ನು ಸಹಿಸಹಚ್ಚಿದವು. ಆದರೀಗ ಸ್ಪಷ್ಟ ಸತ್ಯ ನಮಗೆ ತಿಳಿದಿದೆ. ಯುದ್ಧದ ವಿಧಿಗಳೆಂಬುವು ಬೇರೆ ಯಾವುವೂ ಇಲ್ಲ. ಬಲವೆಂಬುದೆ ವಿಧಿಸರ್ವಸ್ವ. ಈ ಅಟಂಬಾಂಬಿನಿಂದ ಮಿತ್ರಸೈನಿಕರಿಗೆ ಟೊಳ್ಳು ವಿಜಯ ದೊರಕಿತು. ಆದರೆ ಕೆಲ ದಿನಗಳ ಮಟ್ಟಿಗೆ ಜಪಾನದ ಆತ್ಮವನ್ನೆ ನಾಶಮಾಡುವಲ್ಲಿ ಅದು ಪರಿಣಮಿಸಿತು. ವಿನಾಶಕ ರಾಷ್ಟ್ರದ ಆತ್ಮದ ಅವಸ್ಥೆ ಏನಾಗಿದೆಂಬುದನ್ನು ಪರೀಕ್ಷಿಸುವ ಕಾಲ ಇನ್ನೂ ಬಂದಿಲ್ಲ.

ನಿಸರ್ಗ ಶಕ್ತಿಗಳು ಗೂಢ ರೀತಿಯಲ್ಲಿ ಕಾರ್ಯ ಮಾಡುತಿವೆ. ಅಂಥವೆ ಘಟನೆಗಳ ಗೊತ್ತಾದ ಪರಿಣಾಮಗಳಿಂದ ಗೊತ್ತಾಗದಿದ್ದ ಪರಿಣಾಮವನ್ನು ಸರಿಸಿ ಆ ಗೂಢವನ್ನು ನಾವು ಬಿಡಿಸಬಲ್ಲೆವು. ಗುಲಾಮನನ್ನಿರಿಸಿಕೊಂಡಿರುವ ಒಡೆಯನು ಆ ಗುಲಾಮನ ಕೋಣೆಯಲ್ಲಿರಬೇಕಾಗುವುದು ಇಲ್ಲವೆ ತನ್ನ ಅನುಚರನನ್ನಾದರೂ ಆ ಕೋಣೆಯಲ್ಲಿ ಹಾಕಬೇಕಾಗುವದು. ಹಾಗೆ ಮಾಡದೆ ಅವನು ಗುಲಾಮನನ್ನೆ ಇಟ್ಟುಕೊಳ್ಳಲಾರನು. ಜಪಾನರು ತಮ್ಮ ರಾಕ್ಷಸೀ ಮಹತ್ವಾಕಾಂಕ್ಷೆಗಾಗಿ ಮಾಡಿದ ಎಲ್ಲ ದುಷ್ಕೃತಿಗಳನ್ನು ನಾನು ಎತ್ತಿ ಹಿಡಿಯುತ್ತೇನೆಂದು ಮಾತ್ರ ಯಾರೂ ತಿಳಿದುಕೊಳ್ಳಬಾರದು. ಅಂತರವು ಕೇವಲ ಅಂಶಗಳದು ಮಾತ್ರ ಜಪಾನದ ಮಹತ್ವಾಕಾಂಕ್ಷೆ ಹೆಚ್ಚು ರಾಕ್ಷಸೀ ಮಹತ್ವಾಕಾಂಕ್ಷೆಯಾಗಿತ್ತೆಂದು ನಾನು ತಿಳಿಯುತ್ತೇನೆ. ಆದರೆ ಅವರ ಮಹತ್ವಾಕಾಂಕ್ಷೆ ಹೆಚ್ಚು ಅಯೋಗ್ಯವೆನಿಸಿದರೆ ಅವರನ್ನು ಅವರ ಹೆಣ್ಣುಮಕ್ಕಳು ಮತ್ತು ಚಿಕ್ಕಮಕ್ಕಳನ್ನು ನಿರ್ದಯತೆಯಿಂದ ವಿಶಿಷ್ಟ ಪ್ರದೇಶದಲ್ಲಿ ನಾಶಗೊಳಿಸುವ ಅಧಿಕಾರ ಕಡಿಮೆ ಅಸುರೀ ಮಹತ್ವಾಕಾಂಕ್ಷೆಯಿದ್ದವರಿಗೆ ದೊರೆಯಲಾರದು.

ಹಿಂಸೆಯನ್ನು ಪ್ರತಿ ಹಿಂಸೆಯಿಂದ ತಡೆಯುವುದು ಅಶಕ್ಯವಾಗಿರುವಂತೆ ಬಾಂಬಿನ ಅತ್ಯಂತಿಕ ಹಿಂಸೆಯನ್ನು ಪ್ರತಿ ಬಾಂಬಿನಿಂದ ತಡೆಯುವುದು ಶಕ್ಯವಿಲ್ಲೆಂಬುದು ಇದರಿಂದ ಹೊರಡತಕ್ಕ ನ್ಯಾಯವಾದ ಬೋಧೆ. ಮಾನವನು ಹಿಂಸೆಯಿಂದ ಮುಕ್ತನಾಗಬೇಕಾದರೆ ಅಹಿಂಸೆಯಿಂದಲೆ ಸಾಧ್ಯ. ದ್ವೇಷವನ್ನು ಪ್ರೀತಿಯಿಂದಲೆ ಹೋಗಲಾಡಿಸಬಹುದು. ಪ್ರತಿ ದ್ವೇಷದಿಂದ ದ್ವೇಷದ ಬಾಹ್ಯಸ್ವರೂಪ ಮತ್ತು ಗಾಂಭೀರ್ಯ ಮಾತ್ರ ಹೆಚ್ಚುತಿದೆ. ಈ ಮೊದಲು ಅನೇಕ ಸಲ ನಾನು ಹೇಳಿದ್ದನ್ನು ಮತ್ತು ನನಗೆ ಶಕ್ಯವಿದ್ದ ರೀತಿಯಲ್ಲಿ ಆಚರಣೆಯಲ್ಲಿ ತಂದುದನ್ನೇ ಈಗ ಪುನರುಚ್ಚರಿಸುತಿರುವೆನೆಂಬುದರ ಅರಿವು ನನಗಿದೆ. ಮೊದಲು ನಾನು ಹೇಳಿದುದು ಕೂಡ ಹೊಸದೇನು ಆಗಿರಲಿಲ್ಲ. ಅದು ಪರ್ವತದಷ್ಟು ಹಳೆಯದು. ಆದರೆ ನಾನೇನು ಗಿಳಿಪಾಠ ಹೇಳಲಿಲ್ಲ ನನ್ನ ನಾಳನಾಳಗಳಲ್ಲಿ ಯಾವುದರ ಬಗ್ಗೆ ವಿಶ್ವಾಸವಿದೆಯೋ ಅದನ್ನೆ ನಿಶ್ಚಿತವಾಗಿ ಸಾರಿದೆನು. ಅರವತ್ತು ವರ್ಷಗಳ ವರೆಗೆ ಜೀವನದ ವಿವಿಧಾಂಗಗಳಲ್ಲಿ ನನ್ನ ಆಚರಣೆಯಿಂದ ನನ್ನ ವಿಶ್ವಾಸ ಮತ್ತಷ್ಟು ಹೆಚ್ಚಿದೆ. ಮಿತ್ರರ ಅನುಭವ ಆ ವಿಶ್ವಾಸವನ್ನು ದೃಢಪಡಿಸಿದೆ. ಆದರೆ ಅದು ಸತ್ಯದ ಕೇಂದ್ರಬಿಂದುವು. ಸ್ವಲ್ಪವೂ ಹಿಂಜರಿಯದೆ ಮಾನವನು ಇದನ್ನಾಶ್ರಯಿಸಿ ನಿಲ್ಲಬಲ್ಲನು. ಸತ್ಯದಲ್ಲಿ ಅವಿಶ್ವಾಸ ತಾಳುವ ಜನರು ಎಲ್ಲಿಯ ವರೆಗೆ ಇರುವರೋ ಅಲ್ಲಿಯ ವರೆಗೆ ಸತ್ಯವನ್ನು ಪುನಃ ಪುನಃ ಹೇಳತಕ್ಕದ್ದೆಂಬುದಾಗಿ ಮ್ಯಾಕ್ಸವೆಲ್ಲರು ಹಲವು ವರ್ಷಗಳ ಹಿಂದೆ ಹೇಳಿದುದರಲ್ಲಿ ನನ್ನ ವಿಶ್ವಾಸವಿದೆ.

ಪುಣೆ — ಮೋ. ಕ. ಗಾಂಧಿ

೧—೭—೪೬

## ಖಾದೀ ಹುಚ್ಚು

ಈ ವರುಷದ ಚರಖ ಜಯಂತಿಗಾಗಿ ರಾಜಕೋಟ ರಾಷ್ಟ್ರೀಯ ಶಾಲೆಯವರು ಕೆಳಗಿನ ಬಿನ್ನಹ ಪತ್ರವನ್ನು ಹೊರಡಿಸಿರುವರು.

"೮-೭-೧೯೪೬ ರಿಂದ ೨೨-೯-೪೬ ರ ವರೆಗೆ ಜಯಂತಿ ಮಹೋತ್ಸವ. ಗಾಂಧೀಜಿಯವರಿಗೆ ೨೨-೯-೧೯೪೬ಕ್ಕೆ ೭೭ ವರ್ಷ ತುಂಬಿ ೭೮ ನೇ ವರ್ಷ ಪ್ರಾರಂಭವಾಗುವದು. ಗಾಂಧಿ ಜಯಂತಿಯೆಂದರೆ ಚರಖಾ ಜಯಂತಿ.

"ಅಹಿಂಸಾತ್ಮಕ ರಾಜ್ಯದಲ್ಲಿ ಚರಖನೆ ಅಹಿಂಸೆಯ ಪ್ರತೀಕವೆಂದು ಅವರು ಕರೆದಿರುವರು. ನೂರಾರು ವರ್ಷಗಳಿಂದ ನಮ್ಮ ಬಡತನದ, ಅಸಹಾಯತೆಯ ಮತ್ತು ದಾಸ್ಯದ ಪ್ರತೀಕವೆಂದು ಕರೆಯಿಸಿಕೊಳ್ಳಲ್ಪಡುತಿದ್ದ ಚರಖವಿಂದು ನಮ್ಮ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯದ ಪ್ರತೀಕವಾಗಿ ಪರಿಣಮಿಸಿದೆ. ಅದರ ಪುನರುಜ್ಜೀವನವೆಂದರೆ ಯುಗಾಂತರದಿಂದ ಬಂದಿದ್ದ ದೋಷವನ್ನು ಸರಿಪಡಿಸಿದಂತೆ. ಆ ಪ್ರಯತ್ನದ ಯಶಸ್ಸು ನಮ್ಮ ವಿಶ್ವಾಸದ ಅತ್ಯಂತಿಕತೆಯನ್ನು ಅವಲಂಬಿಸುತ್ತದೆ. ವಿಶ್ವಾಸ ಎಷ್ಟು ಪ್ರಬಲವಿದೆಯೊ ಅಷ್ಟು ಮಟ್ಟಿಗೆ ಚರಖದ ಪ್ರಗತಿ ತೀವ್ರವಾಗುವದು.

"ಕಳೆದ ಹನ್ನೆರಡು ವರುಷಗಳಿಂದ ಈ ಶಾಲೆ ಗಾಂಧಿ ಜಯಂತಿಯನ್ನಾಚರಿಸುತ್ತ ಬಂದಿದೆ. ಅದರ ಕಾರ್ಯಕ್ರಮ ಖಾದಿ ವಾತಾವರಣ ಬೆಳೆಯಲು ನಿಶ್ಚಿತವಾಗಿ ಸಹಾಯಕವಾಗಿದೆ. ಅಖಿಲ ಭಾರತ ಚರಖ ಸಂಘವು ಇದೀ ಹಿಂದುಸ್ತಾನಕ್ಕಾಗಿ ಆ ಕಾರ್ಯಕ್ರಮವನ್ನು ಶಿಫಾರಸು ಮಾಡಿದೆ.

"೮—೭—೪೬ ನೆಯ ದಿನ ಮುಂಜಾನೆ ೭-೩೦ ಗಂಟೆಗೆ ಪ್ರಾರ್ಥನೆಯಿಂದ ಈ ವರುಷದ ಕಾರ್ಯಕ್ರಮ ಪ್ರಾರಂಭವಾಗುವುದು. ೭೭ ದಿನಗಳವರೆಗೆ ನೂಲು ತೆಗೆಯಲು ಪ್ರತಿಜ್ಞೆ ತೆಗೆದುಕೊಳ್ಳಲಾಗುವುದು. ಪ್ರತಿ ದಿನ ಒಂದು ಲಡಿ ನೂಲು ತೆಗೆವ ಅನೇಕ ಜನರು ಹೊರಡಬಹುದೆಂದು ನಾನು ಆಸಿಸುತ್ತೇನೆ. ಇಷ್ಟು ವೇಳೆ ಅದಕ್ಕಾಗಿ ಕಳೆಯಲು ಶಕ್ಯವಿಲ್ಲದವರು ಶಕ್ಯವಿದ್ದಷ್ಟು ನೂಲು ತೆಗೆಯಲು ನಿರ್ಧರಿಸುವರು.

ಪ್ರತಿಯೊಬ್ಬನು ತೆಗೆದ ನೂಲು ಅವರವರ ಆವಶ್ಯಕತೆಗಳಿಗಾಗಿಯೆ ವಿನಿಯೋಗಿಸಲಾಗುವದು. ಶಾಲೆಗೆ ಕಾಣಿಕೆಯೆಂದು ಸ್ವಲ್ಪ ನೂಲು ಕೊಡಲಾಗುವದು. ಧನ ರೂಪದ ಕಾಣಿಕೆ ಸಲ್ಲಿಸಬಯಸುವವರು ತಮಗೆ ಸರಿದೋರಿದಂತೆ ಯಾವದೆ ಮೂಲ್ಯದ ೭೭ ನಾಣ್ಯಗಳನ್ನು ವಾಡಿಕೆಯಂತೆ ಕಳಿಸಿಕೊಡಬಲ್ಲರು. ಆದರೆ ನಾಣ್ಯಗಳ ಕಾಣಿಕೆಗಿಂತ ಗಾಂಧೀಜಿ ನೂಲಿನ ಕಾಣಿಕೆಗೆ ಹೆಚ್ಚು ಬೆಲೆ ಕೊಡುತಿರುವರೆಂಬದನ್ನು ಅವರು ನೆನಪಿನಲ್ಲಿಡತಕ್ಕದ್ದು.

"ಪ್ರತಿ ದಿನ ಮುಂಜಾನೆ ೭-೩೦ ಗಂಟೆಗೆ ಸಾಮೂಹಿಕ ಪ್ರಾರ್ಥನೆ ನಡೆಯುವದು. ಅನಂತರ ಸಾಮೂಹಿಕ ನೂಲುವುದು ಪ್ರಾರಂಭವಾಗುವದು. ಈ ಕಾರ್ಯದಲ್ಲಿ ಮುಖಂಡರಾಗಿರುವವರು ಇದರಲ್ಲಿ ಭಾಗವಹಿಸುವರು. ಈ ೭೭ ದಿನಗಳಲ್ಲಿ ರಾಜಕೋಟದ ನಾಗರಿಕರು ದೊಡ್ಡ ಪ್ರಮಾಣದಲ್ಲಿ ಈ ಕಾರ್ಯಕ್ರಮದಲ್ಲಿ ಭಾಗವಹಿಸುವರೆಂದು ನಂಬಲಾಗಿದೆ.

ಕಾಠೇವಾಡದ ಧುರೀಣರಾದ ದರಬಾರ ಸಾಹೇಬ ಗೋಪಾಳದಾಸರು ೭೭ ಲಡಿ ನೂಲು ತೆಗೆಯಲು ನಿರ್ಧರಿಸಿದ್ದಾರೆ. ಎಲ್ಲರೂ ಇವರ ಅನುಕರಣ ಮಾಡಿ ಅದರಂತೆ ನನಗೆ ತಿಳಿಸುವರೆಂದು ಆಶಿಸುತ್ತೇವೆ.

ರಾಷ್ಟ್ರೀಯ ಶಾಲೆಯ ಶಿಕ್ಷಕ ವರ್ಗದವರು ಮತ್ತು ತರುಣ ವಿದ್ಯಾರ್ಥಿಗಳು ೨೦ ಲಕ್ಷ ವಾರ ಖಾದಿ ನೂಲನ್ನು ಉತ್ಪಾದಿಸಬಲ್ಲರೆಂದು ಅಂದಾಜಿದೆ. ವಿರಾಣಿ ಕನ್ಯಾಶಾಲೆ ಮತ್ತು ಹಾಯಸ್ಕೂಲಿನಲ್ಲಿಯ ಅಭ್ಯಾಸಕ್ರಮದಲ್ಲಿ ನೂಲುವದು ದೈನಿಕ ಕಾರ್ಯಕ್ರಮವಾಗಿದೆ. ಈ ವರುಷ ಆ ಶಾಲೆಗಳವರು ಬಹಳ ದೊಡ್ಡ ಪ್ರಮಾಣದಲ್ಲಿ ಕಾಣಿಕೆ ಸಲ್ಲಿಸುವರು.

"ಪರಮಾತ್ಮನು ಈ ಪ್ರಯತ್ನಕ್ಕೆ ಯಶಸ್ಸು ದಯಪಾಲಿಸಲಿ"

ನಾರಾಯಣದಾಸ ಗಾಂಧಿಗೆ ಖಾದಿ ಹುಚ್ಚು ಹಿಡಿದಿದೆ. ನೂಲಿನ ಲಡಿಯ ಸಂಬಂಧದಲ್ಲಿ ನನ್ನ ವಿಚಾರ ದ್ವಿವಿಧವಾಗಿವೆ. ಯಾರು ಬೇಕಾದವರು ತೆಗೆದ ಯಾವದೇ ತರಗತಿಯ ಎಷ್ಟೇ ನೂಲನ್ನು ಒಂದೇ ಕಡೆ ಸಂಗ್ರಹಿಸಬೇಕೆಂಬುದು ಮೊದಲನೆಯದು. ಗಿರಣಿ ನೂಲನ್ನು ಎಷ್ಟು ಬೇಗ ನೇಯುವನೊ ಅಷ್ಟೇ ಬೇಗ ನೇಯುವಂತೆ ಈ ನೂಲನ್ನು ಎಲ್ಲ ವಿಧದಿಂದ ಪೂರ್ವಪಡಿಸಿ ನೇಕಾರನ ಕಡೆಗೆ ಕಳಿಸಬೇಕು. ಇದಕ್ಕಾಗಿ ಎಲ್ಲ ನೂಲನ್ನು ಜೋಡೆಳೆಮಾಡಿ ಹುರಿ ಹಾಕಿ ಕಳಿಸಬೇಕಾಗುವದು. ಈ ವಿಧವಾಗಿ ಹುರಿ ಹಾಕದಿದ್ದ ನೂಲು ನಿಜವಾಗಿ ನೂಲೇ ಅಲ್ಲ. ಆದುದರಿಂದ ನೂಲೂ ಈ ರೀತಿ ದ್ವಿವಿಧವಾಗಿದೆ. ಮೊದಲನೆಯದು ಜೋಡೆಳೆ ಹುರಿ ಹಾಕಿದ್ದು. ಎರಡನೆಯದು ಒಂಟಿಳೆಯದು. ಮೊದಲನೆಯದಕ್ಕೆ ಹೆಚ್ಚು ಬೆಲೆ. ಈ ಯೋಗ್ಯತೆಯನ್ನು ಪಡೆಯಬೇಕಾದರೆ ವೇಳೆ ಹತ್ತುವದೆಂಬುದು ನಿಶ್ಚಿತ. ಅದೇ ಸಮಯಕ್ಕೆ ನೂಲನ್ನು ಪ್ರತ್ಯೇಕಿಸಬೇಕಾಗುವುದು. ಮತ್ತು ಒಂಟಿಳೆಯನ್ನು ಜೋಡೆಳೆಯನ್ನಾಗಿ ಮಾಡಿ ಹುರಿ ಹಾಕಬೇಕಾಗುವದು. ಅನಂತರ ಅದನ್ನು ನೂಲಿನ ಡಿಪೋದಲ್ಲಿ ಇಲ್ಲವೆ ಎಲ್ಲಿ ಶಕ್ಯವಿದೆಯೊ ಅಲ್ಲಿ ನೇಯಿಸಬೇಕು.

ಬಂಗಾರ ಮತ್ತು ಬೆಳ್ಳಿಟಂಕಸಾಲೆಯಿಂದ ಹೇಗೆ ನಾಣ್ಯವಾಗಿ ಹೊರಬರುವದೊ ಅದೇ ರೀತಿ ನೂಲಿನ ಲಡಿಯಿಂದ ಖಾದಿಯು ಹೊರಬೀಳಲಿಕ ಬೇಕೆಂಬುದನ್ನು ನೆನಪಿನಲ್ಲಿಡಬೇಕಾದುದು. ಎರಡನೆ ವಿಷಯ ಇಂಥ ವೇಳೆ ಬರುವವರೆಗೆ ಕೈನೂಲಿನಲ್ಲಿಯ ದೋಷಗಳು ದೂರವಾಗಲಾರವು. ಮತ್ತು ಖಾದಿಯಲ್ಲಿ ಅಪೇಕ್ಷೆಗಿಂತ ಹೆಚ್ಚು ಸುಧಾರಣೆಯಾಗದು. ಒತ್ತಾಯದಿಂದ ಈ ಕಾರ್ಯ ಸಾಧ್ಯವಿಲ್ಲ. ಖಾದಿ ಕಾರ್ಯಕರ್ತರು ಸ್ವಾರ್ಥತ್ಯಾಗಿಗಳು, ಸತ್ಯನಿಷ್ಠರು ಮತ್ತು ಈ ಉಚ್ಚ ಧ್ಯೇಯ ಸಾಧನೆಗಾಗಿ ಸ್ವಯಂಪ್ರೇರಿತರಾಗಿ ಶಾಸ್ತ್ರೀಯ ದೃಷ್ಟಿಯುಳ್ಳವರಾಗಲಿಕ್ಕೆ ಬೇಕು.

ಅದನ್ನು ಸಾಧ್ಯಮಾಡಿಕೊಳ್ಳುವದೆ ಚರಖಾ ಸಂಘದ ನಿಜವಾದ ಧ್ಯೇಯ. ಈ ಧ್ಯೇಯ ಸಾಧನೆಗಾಗಿ ಖಾದಿ ಮಾರಾಟದ ಕೇಂದ್ರಗಳನ್ನೆಲ್ಲ ಮುಚ್ಚಿಬಿಟ್ಟರೂ ಖಾದೀ ಧಾರಿಗಳ ಸಂಖ್ಯೆ ಕೈಬೆರಳಿನಿಂದ ಎಣಿಸುವಷ್ಟು ಕಡಮೆಯಾದರೂ ಚಿಂತೆಯಿಲ್ಲ ಅದಕ್ಕೆ ಹೆದರ ಕೂಡದು. ಹಾಗಾದರೂ ಆ ಪ್ರಯತ್ನದಲ್ಲಿ ಯಾವದೇ ಬಗೆಯ ನಾಚಿಕೆಯಿರಲರಿಯದು. ತದ್ವಿರುದ್ಧವಾಗಿ ಕಾಪಟ್ಯದ ಮತ್ತು ಅಸತ್ಯದ ಪ್ರತೀಕವೆಂದು ಖಾದೀ ಮಾರಾಟ ನಡೆದರೆ ಚರಖಸಂಘ ಮತ್ತು ಕಾಂಗ್ರೆಸ ಎರಡೂ ಸಂಸ್ಥೆಗಳ ಹೆಸರನ್ನು ಕೆಡಿಸಿದಂತಾಗುವದು. ಸ್ವರಾಜ್ಯ ಸಂಪಾದನೆಯ ಸಾಧನವೆಂದಾಗಲಿ ಇಲ್ಲವೆ ಬಡವರ ಏಕಮೇವ ಆಧಾರವೆಂದಾಗಲಿ ಖಾದಿಯು ಹೇಳಿಸಿಕೊಳ್ಳಲು ಎಂದಿಗೂ ಸಮರ್ಥವಾಗಲಾರದು. ವಿಶ್ವಾಸವಿಲ್ಲದಿದ್ದವರು ಕೇಳುತ್ತಾರೆ" ಅಂದ ಬಳಿಕ ಖಾದಿಗಾಗಿ ಇಷ್ಟೊಂದು ಶ್ರಮ ತೆಗೆದುಕೊಳ್ಳುವುದೇಕೆ ? ಹಿಂದುಸ್ತಾನದ ಹಳ್ಳಿ ಉದ್ಯೋಗಗಳಲ್ಲಿ ಅದಕ್ಕೊಂದು ಸ್ಥಾನ ಕಲ್ಪಿಸಿಕೊಟ್ಟರೆ ಸಾಲದೆ ? ಅಹಿಂಸೆಯ ಪ್ರಸ್ತಿಯೇಕೆ? ಖಾದಿ ಹುಚ್ಚು ಹಿಡಿದವರು ಖಾದಿ ಶಾಸ್ತ್ರದ ರಹಸ್ಯವನ್ನು ತಿಳಿದುಕೊಳ್ಳತಕ್ಕದ್ದು ಮತ್ತು ಅದಕ್ಕಾಗಿ ಸಾಯಲು ಕೂಡ ಸಿದ್ಧರಿರತಕ್ಕದ್ದು ಮತ್ತು ಅಹಿಂಸಾತ್ಮಕ ಸ್ವರಾಜ್ಯದ ನಿಜವಾದ ಪ್ರತೀಕ ಖಾದಿಯೆಂಬುದನ್ನು ಅದರಿಂದ ಸಿದ್ಧ ಮಾಡಬೇಕು

ಪುಣೆಯಗಾಡಿಯಲ್ಲಿ — ಮೋ. ಕ. ಗಾಂಧಿ

(ಹರಿಜನ ಬಂಧುವಿನಿಂದ)

## ಡಾ. ಲೋಹಿಯಾರ ಆಹ್ವಾನ

ಪತ್ರಿಕೆಗಳ ವರದಿಯಿಂದ ಡಾ. ಲೋಹಿಯಾರು ಗೋಮಾಂತಕರ ಆಮಂತ್ರಣದ ಮೇಲೆಯೇ ಗೋವೆಗೆ ಹೋದರೆಂದೂ ಅಲ್ಲಿ ಅವರ ಮೇಲೆ ಭಾಷಣಗಳನ್ನು ಮಾಡಬಾರದೆಂಬ ಆಜ್ಞೆಯನ್ನು ಜಾರಿಮಾಡಲಾಯಿತೆಂದೂ ತಿಳಿಯುತ್ತದೆ. ಡಾ. ಲೋಹಿಯಾರ ಹೇಳಿಕೆಯಂತೆ, ಈಗ ೧೮೮ ವರ್ಷಗಳಿಂದ ಗೋವಾ ನಿವಾಸಿಗಳನ್ನು ಸಭೆ ಕೂಡಿಸುವ ಮತ್ತು ಸಂಘಗಳನ್ನು ಸಂಘಟಿಸಿಕೊಳ್ಳುವ ಹಕ್ಕಿನಿಂದ ವಂಚಿಸಲಾಗಿದೆ. ಸ್ವಾಭಾವಿಕವಾಗಿ ಅವರು ಆ ಆಜ್ಞೆಯನ್ನು ಮುರಿದರು. ಅವರು ಆ ಮೂಲಕ ನಾಗರಿಕ ಸ್ವಾತಂತ್ರ್ಯದ ಧ್ಯೇಯಕ್ಕೆ, ಮುಖ್ಯವಾಗಿ ಗೋಮಾಂತಕರಿಗೆ ದೊಡ್ಡ ಸೇವೆ ಸಲ್ಲಿಸಿದಂತಾಗಿದೆ. ಬ್ರಿಟಿಶ ಸರಕಾರದ ಕಟಾಕ್ಷ ಬಲದಿಂದಲೇ ಬದುಕಿರುವ ಈ ಪುಟ್ಟ ಪೋರ್ತುಗೀಜ ವಸತಿ ಬ್ರಿಟಿಶರ ಕೆಟ್ಟ ವರ್ತನೆಯನ್ನು ಅನುಕರಿಸಿದರೆ ಬಾಳಲಾರದು. ಸ್ವತಂತ್ರ ಹಿಂದುಸ್ತಾನದಲ್ಲಿ ಸ್ವತಂತ್ರ ರಾಜ್ಯದ ಕಾಯಿದೆಯನ್ನು ಮೀರಿ ಗೋವೆಯೊಂದನ್ನು ಪ್ರತ್ಯೇಕ ರಾಜ್ಯವಾಗಿ ಉಳಿಯಗೊಡುವದು ಸಾಧ್ಯವಿಲ್ಲ. ಒಂದೇ ಒಂದು ಗುಂಡು ಹಾರಿಸದೆ, ಗೋಮಾಂತಕರು ಸ್ವತಂತ್ರ ರಾಜ್ಯದ ನಾಗರಿಕ ಹಕ್ಕುಗಳನ್ನು ಕೇಳಿ ಪಡೆಯಬಲ್ಲರು. ಸದ್ಯದ ಪೋರ್ತುಗೀಜ ಸರಕಾರ ಇನ್ನು ಮುಂದೆ ಗೋವಾ ನಿವಾಸಿಗಳನ್ನು ಅವರ ಇಚ್ಛೆಗೆ ವಿರುದ್ಧವಾಗಿ ಬೇರ್ಪಡಿಸಿ ತನ್ನ ಅಧೀನದಲ್ಲಿಟ್ಟುಕೊಳ್ಳುವಲ್ಲಿ ಬ್ರಿಟಿಶ ಸರಕಾರದ ಸಶಸ್ತ್ರ ಬಲವನ್ನು ಅವಲಂಬಿಸಲಾರದು. ಅದ್ದರಿಂದ ಬ್ರಿಟಿಶ ಸರಕಾರದೊಡನೆ ತಾನು ಮಾಡಿ —ಅನೇ ಘಟಕ್ಕ

# ಗ್ರಾಮಸೇವಕರಿಗೆ ಸ್ಫೂರ್ತಿದಾಯಕ

ಶ್ರೀ ಬಲದೇವ ಚೌಬೇ ಉರ್ಫ ಸ್ವಾಮೀ ಸತ್ಯಾನಂದರು ೧೯೨೦ ರಲ್ಲಿ ಆರಾಮದ ಭವಿಷ್ಯವನ್ನು ತ್ಯಜಿಸಿ ಕಾಲೇಜಿಗೆ ಶರಣು ಹೊಡೆದರು. ಅಂದಿನಿಂದ ಅವರು ದೇಶಸೇವೆಯನ್ನೇ ತಮ್ಮ ಜೀವನಾದರ್ಶವನ್ನಾಗಿ ಇಟ್ಟುಕೊಂಡರು. ಹತ್ತು ವರ್ಷಗಳ ವರೆಗೆ ಲಾಲಾ ಲಜಪತರಾಯರ ಜನತಾ ಸೇವಕ ಸಂಘದ ಸದಸ್ಯರಾಗಿ ಅವರು ಸೇವೆ ಸಲ್ಲಿಸಿದರು. ಆ ಮೇಲೆ ೧೯೩೪ ರಲ್ಲಿ ಇನ್ನೊಂದು ಹೆಜ್ಜೆ ಮುಂದಿರಿಸಿ ಅವರು ಗ್ರಾಮಸೇವಕರಾಗಲು ನಿರ್ಧರಿಸಿದರು.

ಅದಕ್ಕೆ ಮೊದಲೂ ಸತತ ಖಾದಿಧಾರಿಗಳಾಗಿದ್ದರೂ ಚರಕದ ವಿಷಯದಲ್ಲಿ ಅವರು ಅಷ್ಟು ಆಸಕ್ತಿ ವಹಿಸಿದವರಲ್ಲ. ಅಹಿಂಸೆಯ ಪರಿಪೂರ್ಣ ಅಭಿವ್ಯಕ್ತಿಯೇ ಖಾದಿಯೆಂಬ ಅರಿವು ಅವರಿಗೆ ತಡವಾಗಿ ಬಂತು. ಅನಂತರ ಅವರ ಕಥೆ ಎಷ್ಟು ಮನಮೋಹಕವಾಗಿದೆಯೆಂದರೆ ಅದನ್ನು ಈ ಕೆಳಗೆ ಹೆಚ್ಚುಕಡಿಮೆ ಇದ್ದಕ್ಕಿದ್ದಂತೆ ಎತ್ತಿಕೊಡುತ್ತಿದ್ದೇನೆ.

"೧೯೩೪ ರ ಕೊನೆಯಲ್ಲಿ ನಾನು ಸ್ವಯಂಸಹಾಯ ತತ್ವವನ್ನು ಅನುಸರಿಸಿ ಗ್ರಾಮ ಕಾರ್ಯವನ್ನು ಕೈಗೆ ತೆಗೆದುಕೊಂಡೆ. ಅಂತೆಯೆ ಯುಕ್ತಪ್ರಾಂತದ ಅಝಮಗಡ ಜಿಲ್ಲೆಯ ದೆಹಂಘಾಟ ಎಂಬ ಕಿರುಹಳ್ಳಿಯಲ್ಲಿ ಒಂದು "ಹರಿಜನ ಗುರುಕುಲ"ವನ್ನು ಸ್ಥಾಪಿಸಿದೆ. ನನ್ನ ಕುಟುಂಬದ ಮತ್ತು ಗುರುಕುಲವಾಸಿಗಳ ವೆಚ್ಚದ ಹಾದಿಯನ್ನು ನಾನು ಹುಡುಕಬೇಕಾಗಿತ್ತು. ಸ್ವಯಂಸಹಾಯ ತತ್ವವನ್ನೆ ಬೆಂಬತ್ತಿ ನಾವು ಗುಡಿಸಲು ಕಟ್ಟುವ, ಬಿದಿರಿಂದ ಕಿಡಿಕಿಯಹೊರಕಟ್ಟುಮಾಡುವ, ಮತ್ತು ಪಾಯಖಾನೆಗಾಗಿ ಹೊಂಡ ತೋಡುವ ಕೆಲಸಗಳನ್ನು ಕಲಿತೆವು. ನಮ್ಮ ಹಿಟ್ಟನ್ನು ನಾವೇ ಬೀಸಿಕೊಂಡೆವು, ಅಡಿಗೆಯನ್ನು ಮಾಡಿಕೊಂಡೆವು, ಪಾತ್ರಗಳನ್ನು ತಿಕ್ಕಿಕೊಂಡೆವು, ನಮ್ಮ ಬಟ್ಟೆಗಾಗಿ ಬೇಕಾಗುವಷ್ಟು ನೂಲು ನೂತೆವು, ಬೆಂಕಿ ಉರಿಸಲು ತರಗೆಲೆಗಳನ್ನು ಸಂಗ್ರಹಿಸುತಿದ್ದೆವು, ಸ್ವಲ್ಪ ಭೂಮಿಯನ್ನು ಹಸನು ಮಾಡಿ ನಮ್ಮ ಕಾಯಿಪಲ್ಲೆ ನಾವೇ ಬೆಳೆಸತೊಡಗಿದೆವು. ಹಳ್ಳಿಯ ಮಕ್ಕಳನ್ನು ಓದಿಸುವದು, ಹರಿಜನ ಸೇವೆ ಮೊದಲಾದ ಕಾಂಗ್ರೆಸ ಚಟುವಟಿಕೆಗಳ ಕಾರ್ಯಕ್ರಮವೊಂದನ್ನು ರೂಪಿಸಿಕೊಂಡೆವು. ಪ್ರಾರ್ಥನೆಗೂ ದೈಹಿಕ ಶ್ರಮಕ್ಕೂ ವಿಶೇಷ ಮಹತ್ವವನ್ನು ಕೊಡಲಾಯಿತು. ಅವಿರತ ಸಾಧನೆಯಿಂದ ಪಕ್ಕಾ ಗೋಡೆಗಳನ್ನು ಕಟ್ಟುವದರಲ್ಲಿ ಬೇಗನೇ ನಾವು ಬಹಳ ಕುಶಲರಾದೆವು. ನಮ್ಮ ಗುರುಕುಲ ಹತ್ತಿರದ ರೇಲ್ವೇ ನಿಲ್ದಾಣದಿಂದ ಏಳು ಮೈಲು ದೂರವಿದೆ. ಪ್ರಸ್ತುತ ಅವಧಿಯಲ್ಲಿ ನನಗೆ ಆಶ್ರಮಕ್ಕೂ ನಿಲ್ದಾಣಕ್ಕೂ ನಡುವೆ ೩೫ ಪ್ರಯಾಣಗಳನ್ನು ಮಾಡಬೇಕಾಗಿ ಬಂತು. ಅವುಗಳಲ್ಲೆರಡನ್ನು ಮಾತ್ರ ವಾಹನದಲ್ಲಿ ಮಾಡಲಾಯಿತು. ಉಳಿದವುಗಳೆಲ್ಲ ಕಾಲ್ನಡಿಗೆಯಿಂದಲೇ ಪೂರೈಸಿದವು.

"ಮೂರು ವರ್ಷಗಳ ನಂತರ, ೧೯೩೮ ರಲ್ಲಿ, ಗೇಣಿಯಿಲ್ಲದೆ ೨೫ ಬಿಘೆ ವ್ಯವಸಾಯಭೂಮಿ ನಮಗೆ ದೊರೆಯಿತು. ಅದೇ ವರ್ಷ ಘೂಗ್ರಾ ನದಿಗೆ ಬಂದ ಮಹಾಪೂರದ ಫಲವಾಗಿ ಆಶ್ರಮದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಿಸ್ತಾರವಾದ ಸಂಕಷ್ಟ ಹಬ್ಬಿತು. ನಾವು ನೂಲುವ ಮೂಲಕ ಪರಿಹಾರಕಾರ್ಯವನ್ನು ಸಂಘಟಿಸಿದೆವು. ಬೇಗನೆ ನೂಲುವವರ ಸಂಖ್ಯೆ ಸಾವಿರಗಟ್ಟಲೆ ಆಯಿತು. ೧೯೪೨ ರಲ್ಲಿ ಹಿಂಸಾತ್ಮಕ ಚಟುವಟಿಕೆಗಳಿಂದ ಜಾಗರೂಕತೆಯಿಂದ ದೂರ ಉಳಿದಿದ್ದರೂ ನಮ್ಮ ಪಾಲಿನ ದಬ್ಬಾಳಿಕೆ ನಮಗೆ ಗಂಟುಬೀಳದಿರಲಿಲ್ಲ. ನಮ್ಮ ಗುಡಿಸಲುಗಳಿಗೆ ಕೊಳ್ಳಿ ಹಚ್ಚಿದರು, ನಮ್ಮ ಸೊತ್ತುಗಳನ್ನು ಸೂರೆ ಮಾಡಿದರು. ಆದರೆ ಖಾದಿಯ ಬೇರುಗಳು ಎಷ್ಟೋ ಆಳವಾಗಿಳಿದು ಬಿಟ್ಟಿದ್ದವು. ನಾನು ಬಂಧನದಲ್ಲಿದ್ದಾಗಲೇ ನನ್ನ ಸಹಯೋಗಿಗಳಲ್ಲೊಬ್ಬನು ಖಾದಿ ಕೆಲಸವನ್ನು ಪುನರಾರಂಭಿಸಿದನು. ಅಂದಿನಿಂದ ಅದು ದಿನಕ್ಕೆ ಬೆಳೆಯೆಂದರೆ ಕ್ಷಣಕ್ಕೆ ಬೆಳೆಯುತಿದೆ.

"ನನ್ನ ಬಿಡುಗಡೆಯಾದ ನಂತರ, ಸ್ವರ್ಗವಾಸಿ ಕಸ್ತೂರಬಾ ಅವರ ವಾರ್ಷಿಕ ಸ್ಮರಣಾರ್ಥ ಒಂದು ಸೂತ್ರಯಜ್ಞವನ್ನು ಸಂಘಟಿಸಿದೆವು. ಅಂಥ ಯಜ್ಞಗಳ ಮಹಿಮೆಯಲ್ಲಿ ನನಗೆ ವಿಶ್ವಾಸವಿದೆ. ೧೯೪೪ ಮಾರ್ಚ ೪ ರಿಂದ ಆರಂಭಿಸಿ ಹರಿಗಡಿಯದ ಸೂತ್ರಯಜ್ಞ ನಡೆಯಿತು. ೩೬೫ ದಿನಗಳಲ್ಲಿ ೨೫ ಲಕ್ಷ ಗಜ ನೂಲು ಹುಟ್ಟಿತು. ಆರಿಸುಟ್ಟ ಆಶ್ರಮದ ಗುಡಿಸಲುಗಳ ಭಗ್ನಾವಶೇಷದ ಮೇಲೆಯೆ ಈ ಯಜ್ಞವನ್ನು ನಡೆಸಲಾಯಿತು. ಪರಿಣಾಮವಾಗಿ, ಹಳೆಯ ಅವಶೇಷಗಳ ಸ್ಥಾನದಲ್ಲಿ ಹೊಸ ಗುಡಿಸಲುಗಳೂ ಕಟ್ಟಡಗಳೂ ಏರತೊಡಗಿದವು. ಕಾರ್ಯಕರ್ತರನ್ನೂ ಸಾಮಾನ್ಯ ಜನತೆಯನ್ನೂ ಮುತ್ತಿದ್ದ ಭಗ್ನಮನೋರಥ, ನಿರಾಶೆಮಾಯವಾಗಿಬಿಟ್ಟಿತು.

"೧೯೪೫ ರ ಚಳಿಗಾಲದಲ್ಲಿ ಏಳು ತಿಂಗಳ ಕಾಲ ನಾನು ಸೇವಾಗ್ರಾಮದ ಖಾದಿ ವಿದ್ಯಾಲಯ ವಸತಿಗೃಹದ ಮೇಲ್ವಿಚಾರಕನಾಗಿದ್ದೆ. ನೂಲುವ ಮತ್ತು ಸಂಬಂಧಪಟ್ಟ ಕೆಲಸಗಳ ತಂತ್ರದ ಪರಿಚಯ ನನಗೆ ಆಗಲೆ ದೊರಕಿತ್ತು. ಮೂಲ ಶಿಕ್ಷಣದ ಸೂತ್ರಗಳೂ ತಿಳಿದುದು ಆಗಲೆ. ಈಗ ನಾನು ಕುರುಕುಲದಲ್ಲಿ ಖಾದಿ ಕೆಲಸವನ್ನು ಪ್ರಾರಂಭಿಸಿ ಅದನ್ನು ಹರಿಜನ ಸೇವೆ, ಗ್ರಾಮೋದ್ಧಾರ, ರಾಜಕೀಯ ಶಿಕ್ಷಣಗಳ ಮಾಧ್ಯಮವಾಗಿ ಮಾಡಿದ್ದೇನೆ. ಹರಿಜನ ಯುವಕರು ಸಾವಧಾನವಾಗಿ ಮುಂದೆ ಬರುತಿದ್ದಾರೆ. ಅವರಲ್ಲಿ ಅನೇಕರು ಈಗ ಗುರುಕುಲದಲ್ಲಿ ವಿವಿಧ ಶಾಖೆಗಳ ವ್ಯವಸ್ಥಾಪಕರೂ ಕಾರ್ಯಕರ್ತರೂ ಆಗಿದ್ದಾರೆ.

ನೂಲುವವರಲ್ಲಿ ಅರೆವಾಸಿ ಮುಸ್ಲಿಮ ಭಗಿನಿಯರೇ ಇದ್ದಾರೆ. ನೇಯ್ಗೆಯವರಂತೂ ಪೂರಾ ಅವರೇ ಎಂದರೂ ಸಲ್ಲುವದು. ಸದ್ಯ ನಾವು ಒಂದು ನೂಲಿನ ಮತ್ತೊಂದು ಖಾದಿಯ ಉತ್ಪಾದನ ಕೇಂದ್ರಗಳನ್ನಲ್ಲದೆ ಮೂರು ಖಾದಿ ಮಾರಾಟದ ಭಾಂಡಾರಗಳನ್ನು ನಡೆಸುತಿದ್ದೇವೆ. ಖಾದಿ ಶಾಖೆಯಲ್ಲಿ ೨೦ ಜನ, ವ್ಯವಸಾಯದಲ್ಲಿ ೫ ಜನ, ಶಿಕ್ಷಣದಲ್ಲಿ ೫ ಜನ ಹೀಗೆ ಒಟ್ಟು ೩೦ ಕಾರ್ಯಕರ್ತರು ಈಗ ಇರುವರು. ೧೨ ವಿದ್ಯಾರ್ಥಿಗಳು ಖಾದಿ ಕೆಲಸದಲ್ಲಿ ತರಬೇತಿ ಪಡೆಯುತಿದ್ದಾರೆ. ಎಲ್ಲ ಶಾಖೆಗಳೂ ಸ್ವಾವಲಂಬಿಗಳಾಗಿವೆ. ವಿದ್ಯಾಲಯಕ್ಕೆ ಸಹಾಯಧನವಾಗಿ ತಿಂಗಳಿಗೆ ೩೫ ರೂಪಾಯಿ ಪಡೆಯುತಿದ್ದೇವೆ. ನಮ್ಮ ಮುಖ್ಯ ಕೇಂದ್ರ ರೇಲ್ವೆ ಮಾರ್ಗದಿಂದ ೩೦-೩೫ ಮೈಲು ದೂರದಲ್ಲಿ ಹಸುರು ಹೊಲಗಳ, ಗ್ರಾಮಗುಚ್ಛಗಳ ನಡುವೆ ಇದೆ."

ಪ್ರತ್ಯೇಕ ಹೇಳಿಕೆಯೊಂದರಲ್ಲಿ ಸ್ವಾಮೀಜಿಯವರು ಉತ್ಪಾದನೆಯ ಮತ್ತು ವಿವಿಧ ಅವಸ್ಥೆಗಳಲ್ಲಿ ಹಂಚಲಾದ ಕೂಲಿ ಹಣದ ಅಂಕೆಗಳನ್ನು ಕೊಟ್ಟಿದ್ದಾರೆ. ಅದರಿಂದ ಸೆಪ್ಟೆಂಬರ ೧೯೪೩ ರಿಂದ ಡಿಸೆಂಬರ ೧೯೪೫ರ ನಡುವೆ ರೂ. ೪೪,೧೬೫ ಬೆಲೆಯ ೪೧೮ ಮಣ ನೂಲು ಉತ್ಪನ್ನವಾಯಿತೆಂದು ಗೊತ್ತಾಗುತ್ತದೆ. ಇದನ್ನು ೭೮,೬೦೫ ಗಜ ಖಾದಿಯಾಗಿ ಪರಿವರ್ತಿಸಲಾಯಿತು. ಈ ಉತ್ಪಾದನೆಯ ನೇಯ್ಗೆ, ಗಂಜಿ, ಬಣ್ಣ, ಮತ್ತು ಇಸ್ತ್ರಿ ಕೆಲಸಗಳಿಗಾಗಿ ಒಟ್ಟು ರೂ. ೨೬,೮೯೧ ಹಂಚಲಾಗಿದೆ. ಜೂನ ೧೯೪೬ಕ್ಕೆ ಮುಕ್ತಾಯವಾಗುವ ವರ್ಷದಲ್ಲಿ ಗುರುಕುಲ ಮುಖಾಂತರ ಆದ ಖಾದಿ ಉತ್ಪಾದನೆಯ ಬೆಲೆ ಒಟ್ಟು ರೂ. ೭೫,೦೦೦ ಕ್ಕೆ ಮುಟ್ಟುವದು. ಗುರುಕುಲದ ಆಶ್ರಯದಲ್ಲಿ ಕೆಲಸ ಮಾಡುವ ನೂಲುವವರ ಸಂಖ್ಯೆ ೨೦೦೦ ಇದೆ. ಒಟ್ಟು ಹುಟ್ಟುವಳಿಯಾದ ಖಾದಿಯಲ್ಲಿ ೨೦,೦೦೦ ರೂಪಾಯಿ ಬೆಲೆಯ ಖಾದಿಯನ್ನು ಸ್ವತಃ ನೂಲುವವರೇ ಬಳಸಿದರು. ಉಳಿದುದರಲ್ಲಿ ಅಧಿಕಾಂಶವನ್ನು ಅದೇ ಸ್ಥಳದವರು ಕೊಂಡರು. ಹೊರಜಿಲ್ಲೆಗಳಿಗೆ ಕಳಿಸಲ್ಪಟ್ಟದ್ದು ಎಲ್ಲೋ ಅಲ್ಪಸ್ವಲ್ಪ.

೧೯೪೨ ರ ಹೋರಾಟದಲ್ಲಿ ಸರಕಾರ ನಡೆಸಿದ ದಬ್ಬಾಳಿಕೆಯ ಫಲವಾಗಿ ಈ ಸಂಸ್ಥೆಗಾಗಿ ಈಗಿನ ಬೆಲೆಯಳವಿನಲ್ಲಿ ರೂ. ೨೭,೦೦೦ ದಷ್ಟು ಸೊತ್ತು ನಷ್ಟವಾಯಿತು. ಇದರಿಂದ ಎದೆಗುಂದದೆ, ಸ್ವಾಮೀಜಿಯವರು ಬಿಡುಗಡೆಯಾದೊಡನೆ ಗುರುಕುಲ ಚಟುವಟಿಕೆಯ ನಿರ್ವಹಣಕ್ಕಾಗಿ ಶ್ರೀ ಶ್ರೀಪ್ರಕಾಶರ ಮೂಲಕ ೬,೦೦೦ ರೂಪಾಯಿ ಸಾಲ ಪಡೆದರು. ಅಂದಿನಿಂದೀಚೆಗೆ, ತೀವ್ರವಾದ ಬಟ್ಟೆ ಕೊರತೆಯ ಫಲವಾಗಿ, ಸುತ್ತಲಿನ ಹಳ್ಳಿಗಳಿಂದ ಹೊಸ ಉತ್ಪಾದನ ಕೇಂದ್ರಗಳ ಪ್ರಾರಂಭಕ್ಕಾಗಿಯೂ ನೂಲುವ, ಹಿಂಜುವ ಸಲಕರಣೆ, ಹತ್ತಿ ಮೊದಲಾದವುಗಳಿಗೂ ಅಂತೆಯೆ ನೂಲುವ ಮತ್ತು ತತ್ಸಂಬಂಧಿ ಕ್ರಮಗಳಲ್ಲಿ ಶಿಕ್ಷಣಕ್ಕೂ ಬೇಡಿಕೆ ಹೆಚ್ಚುತ್ತಲೆ ಇದೆ. ಎಂತಲೇ ಭಾರತ ಬ್ಯಾಂಕಿನ ಮೂಲಕ ೨೫,೦೦೦ ರೂಪಾಯಿ ಬೆಲೆಯ ಅರಳಿಯನ್ನು ಉದ್ಧರಿ ಪಡೆದು ಅದನ್ನೂ ಮತ್ತೆ ೧೧,೦೦೦ ರೂಪಾಯಿ ಬೆಲೆಯ ಖಾದಿಯನ್ನೂ ಭದ್ರತೆಯಾಗಿ ಅದೆ ಬ್ಯಾಂಕಿನಲ್ಲಿ ಒತ್ತೆಯಿರಿಸಲಾಯಿತು. ಈ ಒತ್ತಿಯ ಬಡ್ಡಿಯಾಗಿ ತಿಂಗಳಿಗೆ ೨೫೦ ರೂಪಾಯಿ ತೆರಬೇಕಾಗುತ್ತದೆ. ಇಂಥ ಬಡ್ಡಿಯ ಭಾರವನ್ನು ಖಾದಿಯಂಥ ಧರ್ಮಕಾರ್ಯ ತಾಳಲಾರದೆಂಬುದು ಸ್ಪಷ್ಟ. ಆದ್ದರಿಂದ ಬಾಬೂ ಪುರುಷೋತ್ತಮದಾಸ ಟಂಡನ್ನರೇ ಮೊದಲಾದವರ ಸಲಹೆಯ ಮೇರೆಗೆ ಸಂಸ್ಥೆಯನ್ನು ಬಡ್ಡಿ ತೆತ್ತುವ ಸಾಲಗಳಿಂದ ಮುಕ್ತವಾಗಿ ಮಾಡಲು ಸಾಕಷ್ಟು ದೊಡ್ಡ ನಿಧಿಯೊಂದನ್ನು ಎತ್ತಬೇಕೆಂದು ನಿರ್ಧರಿಸಲಾಗಿದೆ. ಬಾಬೂ ಶ್ರೀ ಪ್ರಕಾಶರು ಕೋಶಾಧ್ಯಕ್ಷರಾಗಲು ಒಪ್ಪಿದ್ದಾರೆ. ಇಂಥ ಸುಯೋಗ್ಯ ಸಂಸ್ಥೆ ಸಾಕಷ್ಟು ಹಣವಿಲ್ಲದೆ ಕಷ್ಟಕ್ಕೊಳಗಾಗುವದಾದರೆ ಅದು ನಾಚಿಕೆಗೇಡೇ ಸರಿ.

ಪುಣೆಯ ಗಾಡಿಯಲ್ಲಿ —ಪ್ಯಾರೇಲಾಲ
೨೯-೬-೪೬

## ಒಂದು ವಿಷಾದಮಯ ಚಿತ್ರ

ತಾನು ಬರೆಯುತಿರುವದರ ಅರಿವು ಚೆನ್ನಾಗಿ ಇರುವವನೊಬ್ಬನು ಗಾಂಧೀಜಿಗೆ ಒಂದು ಪತ್ರದಲ್ಲಿ ಬರಗಾಲದ ಬರವನ್ನು ಕುರಿತು ಸರಕಾರ ಪತ್ರಿಕಾ ಪ್ರಕಟನೆಗಳನ್ನು ಹೊರಡಿಸುತಿದ್ದ ಕಾಲದಲ್ಲಿಯೇ ಬಂಗಾಲದ ಬಂದರಗಳಿಂದ ಅಕ್ಕಿಯ ನಿರ್ಯಾತ ಸಾಗಿತ್ತೆಂದು ಸೂಚಿಸಿದ್ದಾನೆ. ೧೯೪೬ ಜನವರಿಯಲ್ಲಿ, ಕಲಕತ್ತೆಯ ರೇವಿನಿಂದ ಅಕ್ಕಿಯನ್ನು ಹೊರಗೆ ಕಳಿಸುತ್ತಿದ್ದಾರೆಂಬ ಸುದ್ದಿ ಪ್ರಕಟವಾದೊಡನೆ ಬಹಳ ದೊಡ್ಡ ಬೊಬ್ಬಾಟವೆದ್ದು, ಬೇರೆ ಬೇರೆ ಕಡೆಯಿಂದ ಸರಕಾರಕ್ಕೆ ಬಂದ ಒತ್ತಾಯಗಳ ಪರಿಣಾಮವಾಗಿ, ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳು, ಇನ್ನು ಮುಂದೆ ಬಂಗಾಲದಿಂದ ಅಕ್ಕಿಯನ್ನು ಹೊರಗೆ ಕಳಿಸುವದಿಲ್ಲವೆಂದು ಭರವಸೆಯಿತ್ತು ಹೇಳಿಕೆಗಳನ್ನು ಹೊರಡಿಸಿದವು. ಆದರೂ ಚಿತಗಾಂಗದಿಂದ ಅಕ್ಕಿಯ ನಿರ್ಯಾತ ಸಾಗಿಯೆ ಇತ್ತು. ಇದನ್ನು ಕಲಕತ್ತೆಯ ಶ್ರದ್ಧಾನಂದ ಪಾರ್ಕಿನಲ್ಲಿ ಮೇ ೨೬ ಕ್ಕೆ ಸೇರಿದ ಸಭೆಯೊಂದರಲ್ಲಿ ಬಂಗಾಲ ಕಾರಖಾನೆದಾರ ಮತ್ತು ವ್ಯಾಪಾರಿ ಮಂಡಲದವರು ಹೊರಗೆಡಹಿದರು. ಇದಕ್ಕುತ್ತರವಾಗಿ ಮೇ ೨೮ ಕ್ಕೆ ಬಂಗಾಲ ಸರಕಾರದವರು ಒಂದು ಹೇಳಿಕೆಯನ್ನು ಮಾತ್ರ ಹೊರಡಿಸಿದರು. "ಚಿತಗಾಂಗದಿಂದ ಅಕ್ಕಿಯನ್ನು ಹೊರಗೆ ಕಳಿಸುತಿದ್ದುದು ಟಿಪೇರಾ ಸಂಸ್ಥಾನ ಏಜನ್ಸಿಯವರು. ಆದರಿಂದ ಬಂಗಾಲ ಸರಕಾರ ಇದಕ್ಕೆ ಹೊಣೆಯಲ್ಲ," ಎಂದು.

ಸರಕಾರದ ಅಸಮರ್ಥವೂ ಅಲಕ್ಷ್ಯಪೂರ್ಣವೂ ಅದ ಆಡಳಿತದ ನಿದರ್ಶನವೆಂದು ಪ್ರಸ್ತುತ ಪತ್ರಲೇಖಕನು ಇನ್ನೊಂದು ಸಂಗತಿಯನ್ನು ಉಲ್ಲೇಖಿಸಿದ್ದಾನೆ. "ಸುಮಾರು ೩೦ ಲಕ್ಷ ಮಣ ಅಕ್ಕಿ ಗೋದಿ ಕಳೆದ ೧೨ ತಿಂಗಳುಗಳಲ್ಲಿ ಸರಕಾರಿ ಉಗ್ರಾಣಗಳಲ್ಲಿ ಹಾಳಾಗಿಹೋಗಿವೆ'' ಎಂಬ ಈ ನಿದರ್ಶನ ಈಗ ಜನಜನಿತವಾಗಿಬಿಟ್ಟಿದೆ. ಇದಕ್ಕೆ ಪರಿಹಾರೋಪಾಯವೆಂದು ಆ ಪತ್ರಲೇಖಕನು ಸೂಚಿಸುವದಿದು: ಆಹಾರ ಧಾನ್ಯಗಳ ವಿತರಣ-ಜೋಪಾಸನೆಗಳನ್ನು ವ್ಯಾಪಾರಿಗಳಿಗೆ ಒಪ್ಪಿಸತಕ್ಕದ್ದು. ಅವರು ಸಾಧಾರಣ ಕಮೀಶನ್ ತಳಹದಿಯಲ್ಲಿ ಜನತಾ ಆಹಾರ ಸಮಿತಿಗಳ ಬಿಗಿಯಾದ ಮೇಲ್ವಿಚಾರಣೆಗೊಳಗಾಗಿ ಕೆಲಸ ಮಾಡತಕ್ಕದ್ದು.

ಮುಂದುವರಿಸುತ್ತ ಅವನು ಹೇಳುತ್ತಾನೆ— ಸರಕಾರದವರು ಸಾಧಾರಣ ಮತ್ತು ಉತ್ತಮ ತರದ ಅಕ್ಕಿಯ ಮೇಲೆ ಮಣಕ್ಕೆ ಕ್ರಮವಾಗಿ ರೂ. ೪ ಮತ್ತು ರೂ. ೧೦ ರ ಲಾಭವನ್ನು ಗಳಿಸುತಿದೆ. ಆದರೆ ಹಿಂದೆ ವ್ಯಾಪಾರಿಗಳು ಮಣವೊಂದಕ್ಕೆ ಎರಡರಿಂದ ನಾಲ್ಕು ಆಣೆಯ ಲಾಭವನ್ನು ಮಾತ್ರ ಪಡೆಯುತ್ತಿದ್ದರು. ಇದೆಲ್ಲ ಸಾಲದ್ದಕ್ಕೆ, ಭತ್ತದ ಗದ್ದೆಗಳನ್ನು ವಶಪಡಿಸಿಕೊಂಡು ಸರಕಾರ ಅದರಲ್ಲಿ ಸಣಬು ಬೆಳೆಸುತಿದೆ. "ಕಳೆದ ಕೆಲ ವರ್ಷಗಳಲ್ಲಿ ವಿಸ್ತಾರವಾದ ಭತ್ತದ ಗದ್ದೆಗಳನ್ನು ಮಿಲಿಟರಿ ಶಿಬಿರ, ವಿಮಾನಕ್ಷೇತ್ರ, ಕಾರಖಾನೆಗಳಿಗಾಗಿ ಸರಕಾರ ಅಕ್ರಮಿಸಿಕೊಂಡಿತು. ಈ ಗದ್ದೆಗಳನ್ನು ಒಡನೆ ಸಾಗುವಳಿಗಾಗಿ ಬಿಟ್ಟುಕೊಡಬೇಕು. ೧೯೪೪ ರಲ್ಲಿ ಸಾಗುವಳಿಯಾಗಿದ್ದ ಸುಮಾರು ೯ ಲಕ್ಷ ಬಿಘೆ ಸಾಗುಮಾಡದೆ ಬಿದ್ದಿತ್ತು. ಇದಲ್ಲದೆ ಈ ವರೆಗೆ ಸಾಗುವಳಿಗೆ ಒಳಗಾಗದ ೪೦ ಲಕ್ಷ ಬಿಘೆ ಭೂಮಿಯಿದೆ. ಇದನ್ನು ಸಾಗುಮಾಡಿದರೆ ಸಾಕಷ್ಟು ಆಹಾರ ಧಾನ್ಯಗಳನ್ನು ತೆಗೆಯಬಹುದು.

ಈ ನಡುವೆ, ಸಾವಿನ ಕಾಳಭೈರವನು ಈಗಾಗಲೆ ಹಳ್ಳಿಗಾಡಿನಲ್ಲಿ ತಾಂಡವವನ್ನು ಆರಂಭಿಸಿದ್ದಾನೆ. ಏಕೆ, ಕಲಕತ್ತೆಯ ಮಾರ್ಗಗಳಲ್ಲಿ ಕೂಡ ಉಪವಾಸ ಮೂಲಕವಾದ ಮರಣಗಳ ವರದಿಗಳು ಬರತೊಡಗಿವೆ. "ಅಕ್ಕಿ ಢಾಕಾದಲ್ಲಿ ಮಣಕ್ಕೆ ೫೦ ರೂಪಾಯಿಯಂತೆ, ಮೈಮೆನಸಿಂಗದಲ್ಲಿ ೪೫ ರೂಪಾಯಿಯಂತೆ ಮಾರುತಿದ್ದರೆ ಇತರ ಜಿಲ್ಹೆಗಳಲ್ಲಿ ಅದರ ಬೆಲೆ ೪೦ ರಿಂದ ೩೦ ರೂಪಾಯಿ ವರೆಗೆ ಇದೆ. ಉಳಿತಾಯದ ಜಿಲ್ಹೆಗಳಲ್ಲಿ ಕೂಡ ಹಿಂದೆ ೪ ರೂಪಾಯಿಗಳಲ್ಲಿ ಮಾರುತಿದ್ದ ಅಕ್ಕಿಯನ್ನು ಈಗ ೨೦ ರೂಪಾಯಿಗೆ ಮಾರಲಾಗುತಿದೆ. ಅಸಾಮರ್ಥ್ಯ ಮತ್ತು ಮಾನವ ಯಾತನೆಯ ಬಗ್ಗೆ ಇರುವ ಉಪೇಕ್ಷೆಯ ಇದಕ್ಕಿಂತ ಭೀಭತ್ಸವಾದ ಚಿತ್ರ ಬೇರೊಂದಿರಲಾರದು. ಇದರಿಂದ ವಿಸ್ತಾರವಾದ ಕ್ಲೇಶ ಹಬ್ಬುವದರಲ್ಲಿ ಸಂದೇಹವಿಲ್ಲ. ದೂರಿಗೆ ಕಾರಣವಾದ ಸಂಗತಿಗಳಲ್ಲಿ ಶೀಘ್ರವೂ ನಿರ್ಣಯಕವೂ ಆದ ಕ್ರಮವನ್ನು ಕೈಕೊಂಡು ಸಂಬಂಧಪಟ್ಟ ಅಧಿಕಾರಿಗಳು ಈ ಕ್ಲೇಶವನ್ನು ಸಮಾಧಾನಗೊಳಿಸುವರೆಂದು ಹಾರೈಸೋಣ.

ಪುಣೆಯ ದಾರಿಯಲ್ಲಿ —ಪ್ಯಾರೇಲಾಲ
೨೯-೬-೪೬

(೭ನೇ ಪುಟದಿಂದ)

ಕೊಂಡಿರಬಹುದಾದ ಒಪ್ಪಂದದ ಬಲದಿಂದ ಆಚರಿಸುವದನ್ನು ಬಿಟ್ಟು ಕಾಲಗತಿಯನ್ನು ನೋಡಿಕೊಂಡು ಗೋವೆಯ ಜನರೊಡನೆ ಗೌರವಪೂರ್ವಕ ಒಪ್ಪಂದಕ್ಕೆ ಬರುವದು ಲೇಸೆಂದು ಗೋವಾ ಸರಕಾರಕ್ಕೆ ಸಲಹೆ ಕೊಡಲು ನಾನು ಧೈರ್ಯ ಮಾಡುತ್ತೇನೆ.

ಗೋವೆಯ ನಿವಾಸಿಗಳಿಗೆ ನಾನು ಹೇಳುವದಿದು— ಹಿಂದುಸ್ತಾನದ ಇತರ ಭಾಗಗಳ ಜನರು ಪ್ರಬಲ ಬ್ರಿಟಿಶ ಸರಕಾರದ ಭಯವನ್ನು ಬಿಟ್ಟಂತೆ ನೀವಾದರೂ ಪೋರ್ತುಗೀಜ ಸರಕಾರದ ಭೀತಿಯನ್ನು ತೊಡೆದುಹಾಕಿ ನಿಮ್ಮ ನಾಗರಿಕ ಸ್ವಾತಂತ್ರ್ಯದ ಮೂಲಭೂತ ಹಕ್ಕುಗಳನ್ನು ಎಲ್ಲ ಬಗೆಯಲ್ಲಿಯೂ ಸ್ಥಾಪಿಸಿಕೊಳ್ಳಿರಿ. ಗೋವಾ ನಿವಾಸಿಗಳಲ್ಲಿರುವ ಧರ್ಮಭಿನ್ನತೆಯಿಂದ ಸಾಮಾನ್ಯ ನಾಗರಿಕ ಜೀವನವನ್ನು ನಡೆಸುವದಕ್ಕೆ ಅಡಚಣಿಯಾಗಲಾರದು. ಅದು ಧಾರ್ಮಿಕ ಗುಂಪುಗಳ ನಡುವೆ ಬಡಿದಾಟದ ವಸ್ತುವಾಗಲೇ ಬಾರದು.

ಹೊಸದಿಲ್ಲಿ ಮೋ. ಕ. ಗಾಂಧಿ
೨೬-೬-೪೬





## ಮದುವೆಯಲ್ಲಿ ಆತ್ಮಸಂಯಮನ

ಶ್ರೀ ನರಹರಿ ಪರೀಖರಿಗೆ ಪ್ರಶ್ನೆ ಕೇಳಿದ ಸುರತದ ಪಾತೀದಾರ ಆಶ್ರಮದ ಅದೇ ಪತ್ರಲೇಖಕನು ಕೆಳಗಿನ ಪ್ರಶ್ನೆಯನ್ನೂ ಕೇಳಿರುವನು.

ಮದುವೆಯಾದ ಬಳಿಕ ಸ್ವರಾಜ್ಯ ಸಿಕ್ಕುವ ವರೆಗೆ ವಿಷಯೋಪಭೋಗಗಳನ್ನು ಮಾಡುವದಿಲ್ಲೆಂದು ಹೇಳುವುದು ನಿಶ್ಚಯವಾಗಿ ವಿಸಂಗತವಾಗಿದೆ. ಆತ್ಮಸಂಯಮನ ಮಾಡಬಯಸುವವನು ಮದುವೆಯನ್ನೆ ಮಾಡಿಕೊಳ್ಳುವ ಅವಶ್ಯಕತೆಯಿಲ್ಲ. ಮದುವೆ ಮಾಡಿಕೊಂಡವನು ವಿಷಯೋಪಭೋಗಗಳನ್ನನುಭವಿಸತಕ್ಕದ್ದು. ಮನುಷ್ಯನು ಸುಸಂಸ್ಕೃತನು. ವಿವಾಹ ಸಂಸ್ಥೆಗಳನ್ನು ನಿರ್ಮಿಸಿಕೊಂಡ ಮಾನವನು ಸುವ್ಯವಸ್ಥಿತ ಮತ್ತು ನ್ಯಾಯ್ಯ ಸಮಾಜ ರಚನೆಗಾಗಿ ಪ್ರಯತ್ನಿಸುತಿರುವನು. ವಿವಾಹ ಸಂಸ್ಥೆಗಳಂಥ ಸಂಸ್ಥೆಗಳಿರದಿದ್ದರೆ ಜನರು ಸ್ತ್ರೀಯರ ಸಂಬಂಧದಲ್ಲಿ ಬಡಿದಾಡುತ್ತಿದ್ದರು. ವಿವಾಹವೆಂದ ಕೂಡಲೆ ಸ್ವೇಚ್ಛಾವಿಹಾರಕ್ಕೆ ಅಪ್ಪಣೆಪತ್ರ ಸಿಕ್ಕಿತೆಂದರ್ಥವಲ್ಲ. ವಿವಾಹದಲ್ಲಿ ಆತ್ಮಸಂಯಮನಕ್ಕೆ ಬೇಕಾದಷ್ಟು ಅವಕಾಶವಿದೆ. ಆದರಿಂದ ವೈವಾಹಿಕ ಜೀವನ ಸುಖಮಯವಾಗುತ್ತದೆ. ಗಂಡಸು ಮತ್ತು ಹೆಂಗಸು ಒಂದೆಡೆಯಿದ್ದು ಪರಸ್ಪರ ಬೆಳವಣಿಗೆಗೆ ಸಹಾಯಕರಾಗುವುದೆ ವೈವಾಹಿಕ ಜೀವನದ ಮುಖ್ಯೋದ್ದೇಶವಾಗಿದೆ. ಹೀಗೆ ಪರಸ್ಪರ ಅಭಿವೃದ್ಧಿ ಹೊಂದುತಿರುವಾಗ ವಿಷಯೋಪಭೋಗಗಳನ್ನೂ ಮಾಡತಕ್ಕದ್ದೆಂಬುದಾಗಿ ಬೇರೆ ಹೇಳಬೇಕಿಲ್ಲ. ಆದರೆ ಅದರಲ್ಲಿ ಯೋಗ್ಯ ನಿಯಂತ್ರಣವಿರತಕ್ಕದ್ದು. ಸ್ವರಾಜ್ಯ ಸಿಕ್ಕುವ ವರೆಗೆ ಸಂಪೂರ್ಣವಾಗಿ ವಿಷಯೋಪಭೋಗಗಳನ್ನು ಬಿಟ್ಟುಬಿಡುವೆವೆಂದು ವಿವಾಹಬದ್ಧ ದಂಪತಿಗಳಿಗೆ ಪ್ರತಿಜ್ಞೆ ತಗೆದುಕೊಳ್ಳಲು ನೀವು ಕೇಳಿದರೆ ಕಪಟಾಚರಣೆಗೆ ನೀವೇ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ. ಆ ದಂಪತಿಗಳ ನೈತಿಕ ಅಧಃಪತನದ ಗಂಡಾಂತರವೂ ಇದರಲ್ಲಿದೆ. ಅಸಾಧಾರಣ ಸ್ತ್ರೀಪುರುಷರು ಮಾತ್ರ ವಿವಾಹಬದ್ಧಬದ್ಧರಾಗಲು ಒಪ್ಪುವದಿಲ್ಲ. ವಿವಾಹ ಬಯಸುವವರು ಮಾನವರಲ್ಲಿಯ ಸಾಮಾನ್ಯ ತರಗತಿಯ ಜನರು. ತನ್ನ ಹೆಂಡತಿಗೆ ಮಾತೃತ್ವದ ಹಕ್ಕನ್ನು ಅಲ್ಲಗಳೆಯಲಾರೆನೆಂದು ಆ ವಿಶಿಷ್ಟವರನು ಹಿಂದುಗಡೆ ಸ್ಪಷ್ಟಪಡಿಸಿದ್ದು ಒಳಿತೇ ಆಯಿತು. ಈ ವಾಕ್ಯದಿಂದ ನಿಜವಾಗಿ ಗಾಂಧೀಜಿಯವರ ... ಮರ್ಯಾದೆಯುಳಿಯಲಿಲ್ಲ. ವಿವಾಹದಲ್ಲಿ ಬ್ರಹ್ಮಚರ್ಯದ ಸೋಗಿನಿಂದ ಕಪಟವನ್ನು ಹೊರತು ಬೇರೆ ಯಾವುದೂ ನೋಡಲಿಕ್ಕೆ ಸಿಗಲರಿಯದು.

"ಸ್ವರಾಜ್ಯ ಸಿಕ್ಕುವವರೆಗೆ ಬ್ರಹ್ಮಚರ್ಯದಿಂದಿರುವೆವೆಂಬ ಪ್ರತಿಜ್ಞೆಯಲ್ಲಡಕವಾಗಿರುವ ರಹಸ್ಯವನ್ನೆಲ್ಲ ಗಾಂಧೀಜಿ ಸ್ಪಷ್ಟವಾಗಿ ವಿವರಿಸಲಿಕ್ಕೆ ಬೇಕು. ನನಗೆ ಅದು ಕೇವಲ ಚೇಷ್ಟೆಯಾಗಿ ತೋರುತ್ತದೆ"

ವಿವಾಹದಲ್ಲಿ ಮುಖ್ಯವಾದುದು ವಿಷಯೋಪಭೋಗವೇ ಎಂದು ಈ ಲೇಖಕನು ಗ್ರಹಿಸಿದ್ದು ವಿಷಾದಕರವಾದುದು. ನಿಜವಾಗಿ ಹೇಳಬೇಕಾದರೆ ಮದುವೆಯ ನಿಜ ಉದ್ದೇಶವು ಸ್ತ್ರೀಪುರುಷರಲ್ಲಿ ನಿಕಟಸ್ನೇಹ ಮತ್ತು ಮಿತ್ರತ್ವವೇ ಇರತಕ್ಕದ್ದು ಮತ್ತು ಇರುವದು. ಅದರಲ್ಲಿ ವಿಷಯೋಪಭೋಗಕ್ಕೆ ಅವಕಾಶವಿಲ್ಲ. ಕೇವಲ ವಿಷಯೋಪಭೋಗಗಳಿಗಾಗಿಮಾಡಲ್ಪಟ್ಟ ವಿವಾಹವುವಿವಾಹವೇ ಅಲ್ಲ. ಆ ತೃಪ್ತಿಯಿಂದ ನಿಜ ಮಿತ್ರತ್ವಕ್ಕೆ ಅರೆದಾಳಿ ಒದೆಯುವದು. ಮಿತ್ರತ್ವಕ್ಕಾಗಿ ಮತ್ತು ಪರಸ್ಪರ ಸೇವೆಗಾಗಿ ಇಂಗ್ಲಿಶ್‌ರಲ್ಲಿ ಮದುವೆಗಳಾಗುತಿರುವುದು ನನಗೆ ಗೊತ್ತು. ನನ್ನ ವೈವಾಹಿಕ ಜೀವನವನ್ನು ಲ್ಲೇಖಿಸುವುದು ಅಪ್ರಾಸಂಗಿಕವಾಗದಿದ್ದರೆ, ನಾನು ಮತ್ತು ನನ್ನ ಹೆಂಡತಿ ತುಂಬಿದ ಯೌವನದಲ್ಲಿಯೆ ವಿಷಯೋಪಭೋಗಗಳನ್ನು ಬಿಟ್ಟೆವು. ಅಂದಿನಿಂದಲೆ ನಿಜವಾದ ವೈವಾಹಿಕ ಜೀವನದ ಮಾಧುರ್ಯವನ್ನು ನಾವು ಸವಿದೆವೆಂದು ಬಲ್ಲೆನು. ಅನಂತರವೆ ನಮ್ಮಿಬ್ಬರ ಮಿತ್ರತ್ವ ಚಿಗುರಿತು. ನಾವಿಬ್ಬರೂ ಹಿಂದುಸ್ತಾನಕ್ಕೆ ಮತ್ತು ಸಾಮಾನ್ಯವಾಗಿ ಮಾನವ ಜನಾಂಗಕ್ಕೆ ನಿಜವಾದ ಸೇವೆ ಸಲ್ಲಿಸಲು ಸಮರ್ಥರಾದೆವು. ನನ್ನ "ಸತ್ಯಶೋಧನೆ"ಯಲ್ಲಿ ನಾನು ಈ ಬಗ್ಗೆ ಬರೆದಿರುವೆನು. ಸೇವೆ



# ಹರಿಜನ ಹರಿಜನೇತರರಲ್ಲಿ ವಿವಾಹ

ಸುರತದ ಪಾತೀದಾರ ಆಶ್ರಮದ ಗೆಳೆಯನೊಬ್ಬನು ಶ್ರೀ ನರಹರಿ ಪರೀಖರಿಗೆ ಬರೆಯುತ್ತಾನೆ—

"ಗಾಂಧೀಜಿ ರಾಜಕಾರಣದಲ್ಲಿ ಪ್ರವೇಶಿಸಿದಂದಿನಿಂದ ಹಿಂದುಸ್ತಾನದಲ್ಲಿ ಅಸ್ಪೃಶ್ಯತಾನಿವಾರಣೆಯ ಚಳವಳಿಗೆ ಒಳ್ಳೇ ಉತ್ತೇಜನ ದೊರೆತಿದೆ. ಸುಶಿಕ್ಷಿತ ಹರಿಜನ ಕನ್ಯೆಯೊಬ್ಬಳನ್ನು ಸವರ್ಣ ಹಿಂದುವಿಗೆ ಮದುವೆಮಾಡಿಕೊಟ್ಟಿದ್ದಾದರೆ ಈ ಚಳವಳಿಗೆ ಒಂದು ಬಗೆಯಿಂದ ಸಹಾಯಕವಾಗುತ್ತದೆ. ಬೇರೆ ದೃಷ್ಟಿಯಿಂದಲೂ ಈ ಪ್ರಶ್ನೆಯನ್ನು ವಿಚಾರಿಸಬೇಕು. ನಮ್ಮ ದೇಶದಲ್ಲಿ ಸ್ತ್ರೀ ಶಿಕ್ಷಣವಿನ್ನೂ ಬಹಳ ಪ್ರಸಾರಗೊಂಡಿಲ್ಲ. ಉಳಿದೆ ಎಲ್ಲ ರೀತಿಯಿಂದ ಹಿಂದುಳಿದ ಹರಿಜನರಲ್ಲಿ ಸುಶಿಕ್ಷಿತ ಹುಡಿಗೆಯರು ಕೈಬೆರಳಿನಿಂದೆಣಿಸುವಷ್ಟು ಜನ ಸಿಕ್ಕಬಹುದು. ಅವರು ಸವರ್ಣ ಹಿಂದುಗಳನ್ನು ಮದುವೆ ಮಾಡಿಕೊಂಡರೆ ತಮ್ಮ ಸಮಾಜದಿಂದ ಬೇರ್ಪಟ್ಟಂತಾಗಿ ಸವರ್ಣ ಹಿಂದುಗಳಲ್ಲಿ ಕೂಡಿ ಹೋಗುವುದು ಸ್ವಾಭಾವಿಕ. ಅವರು ತಮ್ಮ ಜಾತಿ ಭಗಿನಿಯರ ಉದ್ಧಾರ ಕಾರ್ಯವನ್ನು ಒಳಗಿಂದ ಮಾಡಲು ಸಮರ್ಥರಾಗಲಾರರು. ಇಂಥ ಒಂದೆರಡು ಉದಾಹರಣೆಗಳು ನನಗೆ ಗೊತ್ತಿವೆ.

"ಇಂಥ ಮದುವೆಗಳಿಂದ ಹರಿಜನರು ಒಂದರ್ಥದಲ್ಲಿ ಅಜ್ಞಾನದಲ್ಲಿಯೆ ಉಳಿಯುವರೆಂದು ವಾದಿಸಬಹುದು. ಯಾವುದೊಂದು ಜಾತಿಯ ಪ್ರಗತಿಯು ಆ ಜಾತಿಯ ಹೆಣ್ಣುಮಕ್ಕಳ ಪ್ರಗತಿಯನ್ನೆ ಅವಲಂಬಿಸುತ್ತದೆ. ತಮ್ಮಲ್ಲಿಯ ಅತ್ಯುತ್ತಮ ಹೆಣ್ಣುಮಕ್ಕಳನ್ನು ಸವರ್ಣ ಹಿಂದುಗಳಿಗೆ ಕೊಟ್ಟುಬಿಟ್ಟರೆ ಇಂದು ಅತ್ಯಂತ ಅಜ್ಞಾನ ಕೂಪದಲ್ಲಿ ಮುಳುಗಿದ ಹರಿಜನರನ್ನು ಉದ್ಧರಿಸುವ ಮಾರ್ಗವನ್ನೆ ಬಾಪು ಮುಚ್ಚಿಟ್ಟಂತಾಗುವುದು. ಇದನ್ನು ನಿಲ್ಲಿಸಬೇಕೆಂದು ನನಗೆ ಅನಿಸುತ್ತದೆ. ಹರಿಜನ ಕನ್ಯೆಯರು ಸವರ್ಣ ಹಿಂದುಗಳನ್ನು ಮದುವೆಯಾಗಬೇಕಾದರೆ ದಂಪತಿಗಳು ಹರಿಜನರ ಸೇವೆಯಲ್ಲಿಯೇ ತಮ್ಮ ಜೀವನವನ್ನು ಕಳೆಯಬೇಕೆಂಬ ಕರಾರಿನಿಂದ ಮಾತ್ರ ಅವರು ಹಾಗೆ ಮಾಡಬಲ್ಲರು. ಇಲ್ಲದಿದ್ದರೆ ಸುಶಿಕ್ಷಿತ ಹರಿಜನ ಹುಡಿಗೆಯರು ತಮ್ಮ ಜಾತಿಯಲ್ಲಿಯ ಸುಶಿಕ್ಷಿತ ತರುಣರನ್ನೆ ಮದುವೆಯಾಗುವಂತೆ ಅವರ ಮನ ಒಲಿಸಬೇಕು. ನಿಜವಾಗಿ ಅವರು ಸುಶಿಕ್ಷಿತರಾಗಿದ್ದರೆ, ತಮ್ಮ ಜಾತಿಯವರು ಅನುಸರಿಸಬಹುದಾದ ಉದಾಹರಣೆಯನ್ನು ಅವರು ಹಾಕಿ ಕೊಡಬಲ್ಲರು.

"ನಮ್ಮ ಆಶ್ರಮದಲ್ಲಿ ಹರಿಜನ ಮತ್ತು ಹರಿಜನೇತರ ವಿದ್ಯಾರ್ಥಿಗಳು ಯಾವದೇ ಬಗೆಯ ಭೇದಭಾವಗಳಿಲ್ಲದೆ ವಾಸಿಸುತಿರುವರೆಂಬುದು ನಿಮಗೆ ಗೊತ್ತಿರಲಿಕ್ಕೆಸಾಕು. ಪರೀಕ್ಷಿತಲಾಲರು ಪ್ರತಿವರುಷ ಒಬ್ಬಿಬ್ಬ ಹರಿಜನ ವಿದ್ಯಾರ್ಥಿಗಳನ್ನು ಕಳಿಸುತಿರುವರು. ಈ ವರುಷವೂ ಇಬ್ಬರು ಹುಡುಗರನ್ನು ಕಳಿಸಿದ್ದರು. ಅವರಲ್ಲೊಬ್ಬನು ನನಗೆ ಕೇಳಿದನು. 'ಸುಶಿಕ್ಷಿತ ಸವರ್ಣ ಹಿಂದು ಕನ್ಯೆಯರು ಸುಶಿಕ್ಷಿತ ಹರಿಜನ ತರುಣರನ್ನು ಮದುವೆಯಾಗುವಂತೆ ಬಾಪೂ ಅವರನ್ನೇಕೆ ಪ್ರೋತ್ಸಾಹಿಸಬಾರದು? ನಿಜವಾಗಿಯೂ ಅವರು ಹೀಗೆ ಪ್ರೋತ್ಸಾಹಿಸಲಿಕ್ಕೆ ಬೇಕು. ಸವರ್ಣ ಹಿಂದೂ ಹುಡಿಗೆಯರು ಹರಿಜನರೊಡನೆ ಹರಿಜನರಂತೆ ಇರಹತ್ತಿದರೆ ಅವರಿಂದ ಹರಿಜನ ಹುಡಿಗೆಯರು ಬೇಕಾದಷ್ಟು ಕಲಿಯಬಲ್ಲರು. ಆದರಿಂದ ಹರಿಜನೋದ್ಧಾರ ಕಾರ್ಯಕ್ಕೆ ಬಹಳ ಪ್ರೋತ್ಸಾಹನೆ ಸಿಕ್ಕಂತಾಗುವದು.' 'ನಾನೆ ಇದಕ್ಕೆ ಉತ್ತರ ಕೊಡಬಹುದಾಗಿತ್ತು. ಆದರೆ ಬಾಪು ಇದಕ್ಕೆ ಉತ್ತರ ಕೊಡಬೇಕೆಂದು ನನ್ನ ಬಯಕೆ. ಈ ಬಗ್ಗೆ ಗಂಭೀರ ವಿಚಾರ ಅಗತ್ಯವಾಗಿದೆ" ಸುಶಿಕ್ಷಿತ ಹರಿಜನ ಕನ್ಯೆ ಸವರ್ಣ ಹಿಂದುವನ್ನು ಮದುವೆಯಾದರೆ ದಂಪತಿಗಳು ಹರಿಜನ ಸೇವೆಯಲ್ಲಿ ತತ್ಪರರಾಗಬೇಕು. ಕೇವಲ ಸುಖಲೋಲುಪತೆಯೆ ಇಂಥ ವಿವಾಹದ ಉದ್ದೇಶವೆಂದಿಗೂ ಇರಕೂಡದು. ಅದು ಅಯೋಗ್ಯವಾಗುವುದು. ಇದನ್ನು ನಾನೆಂದಿಗೂ ಪ್ರೋತ್ಸಾಹಿಸಲಾರೆನು. ಅತ್ಯುತ್ತಮ ಭಾವನೆಗಳಿಂದ ವಿವಾಹಬದ್ಧರಾದರೂ ವೈವಾಹಿಕ ಜೀವನದಲ್ಲಿ ಅಯಶಸ್ಸು ಸಿಕ್ಕುವ ಸಂಭವವುಂಟು. ಇಂಥ ದುರಂತವನ್ನು ಯಾರೂ ತಪ್ಪಿಸರು. ಒಬ್ಬ ಹರಿಜನ ಹುಡಿಗೆಯಾದರೂ ಒಳ್ಳೆ ಸುಶೀಲ ಸವರ್ಣ ಹಿಂದುವನ್ನು ಮದುವೆಯಾದರೂ ಹರಿಜನರಿಗೆ ಮತ್ತು ಸವರ್ಣ ಹಿಂದುಗಳಿಬ್ಬರಿಗೂ ಅದರಿಂದ ಒಳಿತೆ ಆಗುವದು. ಅವರೊಳ್ಳೆ ರೂಢಿ ಸಂಪ್ರದಾಯವನ್ನು ಹಾಕಿ ಕೊಟ್ಟಂತಾಗುವದು ಮತ್ತು ಆ ಹರಿಜನ ಕನ್ಯೆ ನಿಜವಾಗಿ ಸುಶೀಲಳಿದ್ದರೆ ಅವಳು ತನ್ನ ಪ್ರಭಾವವನ್ನು ಬಹಳ ದೂರದ ವರೆಗೆ ಬೀರಿ ತನ್ನ ಉದಾಹರಣೆಯನ್ನೆ ಎರಡನೆಯವರು ತೀಡುವಂತೆ ಪ್ರೋತ್ಸಾಹಿಸಬಲ್ಲಳು. ಇಂಥ ಮದುವೆಯಿಂದ ಸಮಾಜವೂ ಭಯವಿಹ್ವಲವಾಗುವುದನ್ನು ಬಿಟ್ಟುಗೊಡಬಹುದು. ಇವರಲ್ಲಿ ಯಾವದೇ ಬಗೆಯ ದೋಷವಿಲ್ಲೆಂದು ಅವರು ತಾವಾಗಿಯೆ ಕಂಡುಹಿಡಿಯಬಹುದು. ಇಂಥ ದಂಪತಿಗಳಲ್ಲಿ ಹುಟ್ಟಿದ ಮಕ್ಕಳು ಒಳ್ಳೆಯವರಾಗಿಯೆ ಪರಿಣಮಿಸುವರು. ಅಸ್ಪೃಶ್ಯೋದ್ಧಾರಕ್ಕೆ ಅವರು ಸಹಾಯಕರಾಗುವರು. ಪ್ರತಿಯೊಂದು ಸುಧಾರಣೆಯು ದಂತಕಥೆಯಲ್ಲಿಯಂತೆ ಇರಿವೆಯ ಮಂದಗತಿಯಿಂದಲೆ ಆಗತಕ್ಕದ್ದು. ಪ್ರಗತಿಯ ಮಂದಗತಿಗಾಗಿ ಅಸಮಾಧಾನಗೊಳ್ಳುವುದು ಸುಧಾರಣೆಯೆಂಬುದು ಕಾರ್ಯರೂಪದಲ್ಲಿ ಬರುವದೆಂಬುದರ ಅಜ್ಞಾನವನ್ನೆ ವ್ಯಕ್ತಪಡಿಸುತ್ತದೆ.

ಸವರ್ಣ ಹಿಂದು ಹುಡುಗೆಯರು ಹರಿಜನ ಪತಿಗಳನ್ನಾರಿಸುವದು ನಿಸ್ಸಂದೇಹವಾಗಿ ಇಷ್ಟವಾದುದು. ಅದು ಒಳಿತೆಂದು ಹೇಳಲು ಮಾತ್ರ ನಾನು ಹಿಂಜರಿಯುತ್ತೇನೆ. ಸ್ತ್ರೀಯರು ಪುರುಷರಿಗಿಂತ ಕಡಮೆಯವರೆಂದು ಅವರ ಅರ್ಥವಾಗುವುದು. ಇಂದು ಆ ಬಗೆಯ ಕೀಳು ಭಾವನೆ ಇದೆಂಬುದು ನನಗೆ ಗೊತ್ತಿದೆ. ಈ ಕಾರಣದಿಂದ ಸದ್ಯಕ್ಕೆ ಸವರ್ಣ ಹಿಂದು ಹುಡಿಗೆಯು ಹರಿಜನ ತರುಣನನ್ನು ಮದುವೆಯಾಗುವುದು ಹರಿಜನ ಕನ್ಯೆ ಸವರ್ಣ ಹಿಂದುವನ್ನು ಮದುವೆಯಾಗುವುದಕ್ಕಿಂತ ಒಳಿತೆಂದು ನಾನು ಒಪ್ಪುತ್ತೇನೆ. ನನ್ನಲ್ಲಿ ಸಾಮರ್ಥ್ಯವಿದ್ದರೆ ನನ್ನ ಪ್ರಭಾವಕ್ಕೊಳಗಾದ ಸವರ್ಣಹಿಂದು ಹುಡುಗೆಯರೆಲ್ಲ ಹರಿಜನ ವರರನ್ನೆ ಮದುವೆಯಾಗುವಂತೆ ನಾನವರ ಮನವಲಿಸುತ್ತಿದ್ದೆ. ಆದರೆ ಹಾಗೆ ಮಾಡುವದು ಬಹಳ ಕಠಿನವೆಂದು ಅನುಭವದಿಂದ ನನಗೆ ಗೊತ್ತಾಗಿದೆ. ಹಳೆಯ ಪೂರ್ವಗ್ರಹಗಳನ್ನು ಹರಿದೊಗೆಯುವುದು ಬಹಳ ಕಠಿಣ. ಇಂಥ ಪೂರ್ವಗ್ರಹಗಳನ್ನು ನೋಡಿ ಯಾರೂ ನಗಕೂಡದು. ತಾಳ್ಮೆಯಿಂದ ನಾವು ಅವುಗಳನ್ನು ನಿವಾರಿಸಬೇಕು. ಹರಿಜನನೊಬ್ಬನನ್ನು ಮದುವೆಯಾಗಿಬಿಟ್ಟರೆ ಕೆಲಸ ತೀರಿತೆಂದು ಯಾವಳೊಬ್ಬ ಕನ್ಯೆ ತಿಳಿದುಕೊಂಡು ವಿಷಯಲಂಪಟಳಾಗಿ ಬಿಟ್ಟರೆ ಮೊದಲಿನ ಪರಿಸ್ಥಿತಿಗಿಂತ ಇದು ಹೆಚ್ಚುಕೆಟ್ಟಾಗುವದು. ಮದುವೆಯ ಕೊನೆಯ ಒರೆಗಲ್ಲು ಆಯಾ ಪಂಗಡಗಳಲ್ಲಿ ಸೇವಾಭಾವನೆಯ ಅಭಿವೃದ್ಧಿಯೆ ಆಗಿದೆ. ಇಂಥ ಮದುವೆಗಳಿಗೆ ಅಂಟಿಕೊಂಡ ದೋಷಗಳನ್ನು ಪ್ರತಿಯೊಂದು ಸಮ್ಮಿಶ್ರ ವಿವಾಹವು ಕ್ರಮೇಣ ಹೋಗಲಾಡಿಸಲು ಪ್ರಯತ್ನಿಸುವದು. ಕೊನೆಯಲ್ಲಿ ಒಂದೇ ಒಂದು ಜಾತಿಯಾಗುವದು. 'ಭಂಗಿ' ಎಂಬ ಸುಂದರ ಹೆಸರಿನಿಂದ ಅದು ಕರೆಯಲ್ಪಡುವದು. ಭಂಗಿ ಎಂದರೆ ಎಲ್ಲ ಬಗೆಯ ಹೊಲಸನ್ನು ತೆಗೆಯುವವರು ಇಲ್ಲವೆ ಸುಧಾರಿಸುವವರು. ಇಂಥ ಸುದಿನ ಬೇಗನೆ ಬರಲೆಂದು ನಾವೆಲ್ಲ ಪ್ರಾರ್ಥಿಸೋಣ.

ಆದರೆ ನನ್ನ ಅತ್ಯುತ್ತಮ ಬಯಕೆಗಳು ಕೂಡ ಕೇವಲ ಅದಿ ತೋರಿಸುವದರಿಂದ ನಿಜವಾಗಿ ಪರಿಣಮಿಸಲಾರವೆಂಬದನ್ನು ಪತ್ರಲೇಖಕನು ತಿಳಿದುಕೊಳ್ಳಲಿಕ್ಕೆ ಬೇಕು. ನಾನು ಘೋಷಣೆ ಮಾಡಿದ ಬಳಿಕ ಈ ವರೆಗೆ ಒಬ್ಬ ಹರಿಜನ ಕನ್ಯೆಯನಾದರೂ ಸವರ್ಣ ಹಿಂದುವಿನೊಡನೆ ವಿವಾಹ ಮಾಡಿಕೊಡುವಲ್ಲಿ ನಾನು ಯಶಸ್ವಿಯಾಗಿಲ್ಲ. ನನ್ನಲ್ಲಿ ಸವರ್ಣ ಹಿಂದು ಕನ್ಯೆಯೊಬ್ಬಳಿರುವಳು. ಅವಳು ತನ್ನ ತಂದೆಯ ಇಷ್ಟದಂತೆ ಅವನೆ ಆರಿಸಿದ ಹರಿಜನ ಹುಡುಗನನ್ನು ಮದುವೆಯಾಗಬಯಸಿರುವಳು. ಆ ಹುಡುಗನೀಗ ಸೇವಾಗ್ರಾಮದಲ್ಲಿ ಶಿಕ್ಷಣ ಪಡೆಯುತಿರುವನು. ಪರಮಾತ್ಮನ ಕೃಪೆಯಿದ್ದರೆ ಬೇಗನೆ ಈ ಮದುವೆ ಒದಗಿ ಬರಬಲ್ಲದು.

ಪುಣೆ ಮೋ. ಕ. ಗಾಂಧಿ
೩೦-೬-೪೬

ಪುಣೆ ಗಾಡಿಯಲ್ಲಿ
೩೦-೬-೪೬ ಮೋ. ಕ. ಗಾಂಧಿ
( ಹರಿಜನ ಬಂಧುವಿನಿಂದ )

# ನಾರದ ಪತ್ರ

## ಅಹಿಂಸೆಯ ದಾರಿ

ಕಾಂಗ್ರೆಸ್ ಕಾರ್ಯಸಮಿತಿಗೂ ಗಾಂಧೀಜಿಗೂ ಒಡಕುಂಟಾಗಿದೆಯೆಂದು ಹೇಳಿಕೊಂಡು ಅದರಿಂದ ಅಕಾಲದಲ್ಲಿ ಸಂತೋಷ ಹಬ್ಬಿಕೊಂಡವರಿಗೆ ನಿಸ್ಸಂಶಯವಾಗಿ ನಿರಾಶೆಯುಂಟಾಗುವದು. ಅಹಿಂಸೆಯ ರೀತಿನೀತಿ ಅವರಿಗೆ ಗೊತ್ತಿಲ್ಲ. ಭಿನ್ನಾಭಿಪ್ರಾಯವೆಂದರೆ ಒಡಕಲ್ಲ. ವೈವಿಧ್ಯದಲ್ಲಿ ಐಕ್ಯವಿರುವುದೇ ಪ್ರಕೃತಿ ನಿಯಮ. ಒಡಕು ಹುಟ್ಟಿಸುವ ಶಕ್ತಿ ಅಹಂಮನ್ಯತೆ ಆದ್ದರಿಂದ ಗಾಂಧೀಜಿಗೆ ಕಾಂಗ್ರೆಸ್ಸಿನೊಡನೆ ಒದಗಿದ ಭಿನ್ನಾಭಿಪ್ರಾಯ ಕಾಂಗ್ರೆಸ್ಸನ್ನು ಬಲಗೊಳಿಸುವ ಉದ್ದೇಶದಿಂದ ಕೂಡಿತ್ತು ಹೊರತು ಅದನ್ನು ದುರ್ಬಲಗೊಳಿಸುವ ಪಕ್ಕಲ್ಲ. ಒಂದು ಪ್ರಾರ್ಥನಾ ಸಭೆಯಲ್ಲಿ ಅವರು ಈ ವಿಷಯವನ್ನೆತ್ತಿಕೊಂಡು ಮಾತಾಡಿದರು. "ಬಹಳ ವಿಚಾರಮಾಡಿದ ನಂತರವೇ ಕಾರ್ಯಸಮಿತಿ ಈ ನಿರ್ಣಯಕ್ಕೆ ಬಂದಿದೆ," ಎಂದರವರು. "ಅವರ ಒಂದು ಉದ್ದೇಶವೆಂದರೆ ಹಿಂದುಸ್ತಾನದ ಹಿತ. ಸದುದ್ದೇಶದಿಂದ ಕೂಡಿದ ಯಾವುದೇ ಕೃತಿಯ ಪರಿಣಾಮ ಕೊನೆಯಲ್ಲಿ ಮಂಗಲಕರವೇ ಆಗುವದೆಂಬ ವಿಶ್ವಾಸವನ್ನು ನಾವು ಹಿಡಿದಿರಬೇಕು. ಇದೇ ಈ ಘಟನೆಗೆ ನಾವು ಮಾಡಿಕೊಳ್ಳಬೇಕಾದ ಅರ್ಥವೆಂದು ನನ್ನ ಎಣಿಕೆ. ಕಾಂಗ್ರೆಸ್ಸು ಕಳೆದ ೬೦ವರ್ಷಗಳಲ್ಲಿ ಮಾಡಿದ ಅವಿರತ ಸೇವೆಯನ್ನು ನೋಡಿ ನೀವು ಅಂಥ ವಿಶ್ವಾಸನನ್ನು ಹಿಡಿಯುವದು ಅನುಚಿತವಲ್ಲ.

"ಹಿಂದುಸ್ತಾನವನ್ನು ತನ್ನ ಹೃದಯಸರ್ವಸ್ವದಿಂದ ಸೇವಿಸುವ ಯಾವ ಸ್ತ್ರೀಯಾಗಲಿ ಪುರುಷರಾಗಲಿ ಅತಿ ವರಿಷ್ಠ ಕಾಂಗ್ರೆಸ್ಸಿಗನ ಸಮಾನಿಕನೇ ಸರಿ. ಧ್ಯೇಯವನ್ನು ಕುರಿತು ಪರಮಾವಧಿ ಆತ್ಮಾರ್ಪಣ ಭಾವವೊಂದಿದ್ದರೆ, ದೇವರ ದೃಷ್ಟಿಯಲ್ಲಿ ಕಾಂಗ್ರೆಸ್ ಸಂಸ್ಥೆಯ ಅತಿ ನಿಮ್ನ ಸೇವೆಯೂ ಅತ್ಯುಚ್ಚ ಮುಂದಾಳಿನ ಸೇವೆಗೆ ಸರಿದೊರೆಯೆನಿಸುವದು."

ದಕ್ಷಿಣ ಆಫ್ರಿಕೆಯಲ್ಲಿ ದಿನದಿನಕ್ಕೂ ಹೆಚ್ಚು ಹೆಚ್ಚು ಆವೇಶಗೊಳ್ಳುತಿರುವ ಕೆಲ ಬಿಳಿಯರ ದೌರ್ಜನ್ಯದ ಮುಂದೆ ಹಿಂದೀ ಸತ್ಯಾಗ್ರಹಿಗಳು ತೋರುತಿರುವ ಪ್ರಶಾಂತ, ಗಂಭೀರ ನಡೆವಳಿಯ ದೈನಂದಿನ ವರದಿಗಳನ್ನು ದಿಲ್ಲಿಯಲ್ಲಿ ತಾವುಳಿದುಕೊಂಡ ಕೊನೆಯ ಕೆಲ ದಿನಗಳ ಪ್ರಾರ್ಥನಾ ಭಾಷಣಗಳಲ್ಲಿ ಪ್ರಸ್ತಾವಿಸಿದರು. ಬಿಳಿಯರ ಮತ್ತು ನೀಗ್ರೋಗಳ ಪ್ರಚಂಡ ಬಹುಸಂಖ್ಯೆಯ ಮಧ್ಯದಲ್ಲಿ ದಕ್ಷಿಣ ಆಫ್ರಿಕೆಯಲ್ಲಿ ಹಿಂದೀಯರು ಬೆರಳೆಣಿಕೆಯಷ್ಟಿದ್ದಾರೆ— ಹೆಚ್ಚೆಂದರೆ ೨ ಲಕ್ಷಕ್ಕಿಂತ ತುಸು ಹೆಚ್ಚು— ಆಗಬಹುದು. "ಡಾಕ್ಟರ ದಾದೂ ಮತ್ತು ಡಾ. ನಾಯಕರಂಥ ಜನರಿಗೆ ನಿರ್ದಿಷ್ಟ ಸ್ಥಾನಗಳಲ್ಲಿ ನಿರ್ಬಂಧಕ್ಕೊಳಗಾಗಿ ಬಾಳುವದೆಂದರೆ ಹೇಗೆ ಅನಿಸುತಿರಬೇಕೆಂದು ನೀವೇ ಊಹಿಸಿರಿ. ನಮ್ಮ ಈ ದೇಶಬಾಂಧವರಿಗೆ ಕೊನೆಯ ವರೆಗೆ ದೃಢವಾಗಿ ಉಳಿಯುವ ಶಕ್ತಿಯನ್ನೂ ಬಿಳಿಯರಿಗೆ ವಿವೇಕವನ್ನೂ ದಯಪಾಲಿಸೆಂದು ನೀವೆಲ್ಲ ಪ್ರಾರ್ಥಿಸುತ್ತ ಇರಬೇಕೆಂದು ನನ್ನ ಆಶೆ. ಹೃತ್ಪೂರ್ವಕ ಪ್ರಾರ್ಥನೆಯಿಂದ ಸಾಧಿಸಬಹುದಾದುದನ್ನು ಜಗತ್ತಿನಲ್ಲಿ ಮತ್ತಾವುದೂ ಸಾಧಿಸಲಾರದೆಂದು ಇಲ್ಲಿ ಒತ್ತಿ ಹೇಳುವೆ."

ದಿನ ದಿನಕ್ಕೆ ಹೆಚ್ಚುತಿರುವ ಅತ್ಯಾಚಾರದ ಮಧ್ಯದಲ್ಲಿ ಪ್ರತೀಕಾರ ಮಾಡದೆ ಧೈರ್ಯದಿಂದ ಕ್ಲೇಶಗಳನ್ನು ಅನುಭವಿಸುತ್ತಿರುವ ಸತ್ಯಾಗ್ರಹಿಗಳು ಗಾಂಧೀಜಿಯ ಹೊಗಳಿಕೆಗೆ ಪಾತ್ರರಾದರು. "ನಾನು ಹುಟ್ಟಿದ್ದು ಹಿಂದುಸ್ತಾನದಲ್ಲಾದರೂ ನನ್ನ ಬಾಳು ರೂಪುಗೊಂಡದ್ದು ದಕ್ಷಿಣ ಆಫ್ರಿಕೆಯಲ್ಲಿ. ಅದರ ಪ್ರತಿಯೊಂದು ಪ್ರಾಂತವೂ ನನಗೆ ಗೊತ್ತು. ನನ್ನ ಜೀವನದ ಮಧ್ಯದ ೨೦ ವರ್ಷಗಳನ್ನು ಅಲ್ಲಿ ಕಳೆದಿದ್ದೇನೆ. ದಕ್ಷಿಣ ಆಫ್ರಿಕೆಯ ಬಿಳಿಯರು ನನಗೆ ಗೊತ್ತು. ನನ್ನ ದೇಶಬಾಂಧವರಷ್ಟೇ ಅವರೂ ನನಗೆ ಪ್ರಿಯರಾಗಿದ್ದಾರೆ. ಈ ಅತ್ಯಾಚಾರಗಳಿಗೆ ದಕ್ಷಿಣ ಆಫ್ರಿಕೆಯ ಬಿಳಿ ಜನರಲ್ಲಿ ಹೆಚ್ಚಿನವರ ಸಹಾನುಭೂತಿಯುಂಟೆಂದು ನನಗೆ ಶಂಕೆಯುಂಟು. ಅಂಥ ಮೂಕ ಸಹಾನುಭೂತಿಯಿಲ್ಲದೆ ಈ ಅತ್ಯಾಚಾರಗಳು ಬಾಳಲಾರವು. ಸತ್ಯಾಗ್ರಹಿಗಳ ಶಕ್ತಿ, ಪ್ರಾಮಾಣಿಕತೆಗಳ ಅರಿವು ಈ ಬಿಳಿಯರಿಗಾದಾಗ ಅವರು ತಮ್ಮ ಸಹಾನುಭೂತಿಯನ್ನು ಕ್ಲೇಶಪಡುತ್ತಿರುವ ಸತ್ಯಾಗ್ರಹಿಗಳ ಕಡೆ, ಹೊರಳಿಸುವರೆಂಬ ಆಶೆ ನನಗುಂಟು" ಎಂದು ಗಾಂಧೀಜಿ ನುಡಿದರು. ಅತ್ಯಾಚಾರಿಗಳನ್ನು ದೇವರು ಕ್ಷಮಿಸಲೆಂದು ಎಲ್ಲರೂ ಪ್ರಾರ್ಥಿಸಬೇಕೆಂದು ಅವರು ಅಪೇಕ್ಷಿಸಿದರು. ನಮ್ಮ ದೇಶಬಾಂಧವರಿಗೆ ಹಣ ಕಳಿಸಬೇಕೆಂದು ಗಾಂಧೀಜಿಯ ಅಭಿಪ್ರಾಯವಿಲ್ಲ. ಹಣ ಕೊಟ್ಟು ಅವರು ವಿಜಯ ಪಡೆಯುವಂತಿಲ್ಲ. ಅಲ್ಲದೆ ಬೇಕಾದಷ್ಟು ಹಣ ಅವರಲ್ಲಿದೆ. ಆದರೆ ನಮ್ಮ ದೇಶಬಾಂಧವರ ಸಲುವಾಗಿ ಅತ್ಯಂತ ಪರಿಶುದ್ಧ ಸ್ವರೂಪದ ಸತ್ಯಾಗ್ರಹವನ್ನು ಹಿಂದುಸ್ತಾನದಲ್ಲಿ ಹೂಡಬೇಕಾದ ಸಂದರ್ಭವೊಂದು ಒದಗಬಹುದು. "ಹೇಗೆಂದು ಈಗಲೇ ನಾನು ಹೇಳಲಾರೆ. ಹಿಂದುಸ್ತಾನ ಮಾನವ ಜಾತಿಯ ಅಭಿಮಾನ-ಗೌರವಗಳ ಕಣಜವಾಗುವ ದಿನ ಸಮೀಪಿಸಿದೆ. ದಕ್ಷಿಣ ಆಫ್ರಿಕೆಯ ಶೂರ ಸತ್ಯಾಗ್ರಹಿಗಳ ಹೋರಾಟದಲ್ಲಿ ಅವರಿಗೆ ಸಹಾಯ ನೀಡುವ ಪಾಳಿ ನಮಗೆ ಬಂದರೆ ಅದು ಉಚಿತವೇ ಆಗುವದು. ಆದರೆ ಇದಕ್ಕೆ ನಮ್ಮ ಮುಂದಿನ ದಾರಿ ನಮಗೆ ಸ್ಪಷ್ಟವಾಗಿ ಕಾಣಿಸುತಿರಬೇಕು. ಕಾಲ ಬಂದಾಗ ಆ ದಾರಿ ತಮಗೆ ಕಾಣಿಸದಿರದೆಂದು ಗಾಂಧೀಜಿ ಭರವಸೆ ಹಿಡಿದಿದ್ದಾರೆ ಈ ನಡುವೆ ವಾಯಿಸರಾಯರೂ ಹಿಂದುಸ್ತಾನದಲ್ಲಿರುವ ಬಿಳಿಯ ಸ್ತ್ರೀ ಪುರುಷರು ತಮ್ಮ ಕರ್ತವ್ಯ ಮಾಡಬೇಕೆಂದು ಅವರು ಹಾರೈಸಿದರು.

ಬೀಳ್ಕೊಳ್ಳುವ ಪ್ರಾರ್ಥನಾ ಸಮುದಾಯದಲ್ಲಿ ಅವರು ಮಾಡಿದ ಭಾಷಣದಲ್ಲಿ ಒಂದುಬಗೆಯ ಸಂಯತ ಆವೇಗದ ರೇಖೆ ತೋರಿಬರುತಿತ್ತು. ಸುಮಾರು ಮೂರು ತಿಂಗಳ ವರೆಗೆ ದಿಲ್ಲಿ ನಿವಾಸಿಗಳೊಡನೆ ಅವರು ಕಳೆದ ದಿನಗಳ (ನಡುವೆ ಎರಡೇ ಸಲ ಅವರು ಬೇರೆಡೆಗೆ ಹೋಗಿದ್ದರು.) ಸಿಂಹಾವಲೋಕನ ಮಾಡುತ್ತ ಅವರು, ತಾವು ಅಲ್ಲಿ ಬಿಟ್ಟು ಹೋಗುತಿರುವದರಲ್ಲೆಲ್ಲ ಅತಿ ಅಮೂಲ್ಯವಾದ ಸಾಮೂಹಿಕ ಪ್ರಾರ್ಥನೆಯ ಪದ್ಧತಿಯನ್ನು ಬಿಡದೆ ಅನುಷ್ಠಾನ ಮಾಡಿಕೊಂಡು ಹೋಗಬೇಕೆಂದು ನೆರೆದವರನ್ನು ಕೇಳಿಕೊಂಡರು. ಪ್ರಾರ್ಥನಾ ಸ್ತೋತ್ರಗಳನ್ನು ಉಚ್ಚರಿಸದಿದ್ದರೂ ಅಡ್ಡಿಯಿಲ್ಲ. ಆದರೆ ಕುಟುಂಬದ ಎಲ್ಲ ಸದಸ್ಯರೂ ದಿನಕ್ಕೊಂದು ಬಾರಿ, ಅನುಕೂಲ ವೇಳೆಯಲ್ಲಿ ಒಂದೆಡೆ ಸೇರಿ ಪರಮಾವಧಿಯೆಂದರೆ ಐದು ನಿಮಿಷಕಾಲ ಮೌನದಿಂದ ಅಂತರಂಗದಲ್ಲಿರುವ ಪರಮಾತ್ಮನಲ್ಲಿ ಚಿತ್ತವನ್ನು ವೇಧಿಸುವದು ಮಾತ್ರ ಅತ್ಯಂತ ಆವಶ್ಯವಾಗಿದೆಯೆಂದು ಅವರು ಉಪದೇಶಿಸಿದರು.

### ಭರವಸೆಯ ಅರ್ಥ

ರಾಜಧಾನಿಯ ಧೂಳಿಕೊಂಪೆಯಲ್ಲಿ ಮೂರು ತಿಂಗಳ ಸಂತತ ಶ್ರಮದ ನಂತರ ಕೊನೆಗೊಮ್ಮೆ ಪಂಚಗಣಿಗೆ ಧಾವಿಸಿ ತಮ್ಮ ದೇಹದಲ್ಲಿ ಶಕ್ತಿ ತುಂಬಿಕೊಳ್ಳಲು ಗಾಂಧೀಜಿಗೆ ಅವಕಾಶ ದೊರೆತಿದೆ. "ಈ ವರ್ಷದ ಇನ್ನುಳಿದ ಭಾಗವನ್ನು ಸಾಗಿಸಿಕೊಂಡು ಹೋಗಬೇಕಾದರೆ ಎರಡು ತಿಂಗಳ ಪರ್ವತವಾಯು ನನಗೆ ಅವಶ್ಯವೆಂದು ತೋರತೊಡಗಿದೆ. ಇದರಿಂದೊದಗುವ ಪರಿವರ್ತನೆ ಆಶ್ಚರ್ಯಕವಾಗಿದೆ," ಎಂದು ದಿಲ್ಲಿಯನ್ನು ಬಿಟ್ಟು ಹೊರಡುವ ದಿನ ಅವರು ಹೇಳಿದರು. "ಆದರೆ ಈ ಚಮತ್ಕಾರದ ಪರಿಣಾಮ ನಿಜವಾಗಿ ರಾಮನಾಮದ ಮಹಿಮೆಯೇನೋ ಎಂಬ ಸಂಶಯ ನನಗಿದ್ದೇ ಇದೆ." ಇದೇ ಬಗೆಯ ಅಸೀಮ ಪರಮಾತ್ಮ ಭಕ್ತಿ ಅವರ ಇನ್ನೊಂದು ಪ್ರಾರ್ಥನಾ ಸಭೆಯಲ್ಲಿಯೂ ಗೋಚರಕ್ಕೆ ಬರುತಿತ್ತು. ಭಾಗವತಕ್ಕೆ ಭೂಷಣಪ್ರಾಯವಾದ ಗಜೇಂದ್ರ-ಗ್ರಹ (ಮೊಸಳೆ) ಕಥೆಯನ್ನು ಅವರು ಎತ್ತಿಕೊಂಡಿದ್ದರು. "ಈ ಕಥೆ ಕಲಿಸುವ ಪಾಠವೆಂದರೆ," ಗಾಂಧೀಜಿ ವಿವರಿಸಿದರು, "ದೇವರು ತಮ್ಮ ಭಕ್ತರನ್ನು ಸಂಕಟಕಾಲದಲ್ಲಿ ಎಂದೂ ಕೈಬಿಡುವದಿಲ್ಲ, ಎಂಬುದು. ಅವನಲ್ಲಿ ಅವಿಚ್ಛಿನ್ನ ವಿಶ್ವಾಸ ಮತ್ತು ಪರಿಪೂರ್ಣ ಅವಲಂಬನ ಇವು ಮಾತ್ರ ಅತ್ಯವಶ್ಯಕವಾಗಿವೆ. ಆ ವಿಶ್ವಾಸದ ಒರೆಗಲ್ಲು ಇದು— ನಮ್ಮ ಕರ್ತವ್ಯವನ್ನಷ್ಟು ಮಾಡಿ ಬಿಟ್ಟು, ಮುಂದೆ ಅವನು ಕರುಣಿಸಬಹುದಾದ ಯಾವುದೇ ಫಲವನ್ನು ಸ್ವಾಗತಿಸಲು ನಾವು ಸಿದ್ಧರಾಗಬೇಕು —ಅದು ಸುಖವಿರಲಿ ದುಃಖವಿರಲಿ, ಸುದೈವವಿರಲಿ ದುರ್ದೈವವಿರಲಿ ಆಗ, ತನ್ನ ರಾಜಧಾನಿ ಹೊತ್ತಿಕೊಂಡು ಉರಿಯುತಿದೆಯೆಂಬ ವಾರ್ತೆ ಬಂದಾಗ ಅದರಗೊಡವೆ ತನಗಿಲ್ಲವೆಂದು ನುಡಿದ ಜನಕನಂತೆ ನಾವೂ ನಿಶ್ಚಿಂತರಾಗುವೆವು. ತನ್ನ ಕರ್ತವ್ಯಪಾಲನೆಯಲ್ಲಿ ಚ್ಯುತನಾಗದೆ ಯಾವಾಗಲೂ ಜಾಗ್ರತಚಿತ್ತನಾಗಿದ್ದುದರಿಂದಲೇ ಜನಕನಲ್ಲಿ ಈ ಅನಾಸಕ್ತಿ, ಈ ಅವಿಚಲತೆ ಇರಲು ಸಾಧ್ಯವಾಯಿತು. ತನ್ನ ಪಾಲಿನ ಕರ್ತವ್ಯವನ್ನು ಮಾಡಿ ಉಳಿದುದುದನ್ನು ಪರಮಾತ್ಮನ ಇಚ್ಛೆಗೆ ಬಿಡಲು ಅವನು ಸಮರ್ಥನಾಗಿದ್ದನು.

"ಅದ್ದರಿಂದ, ಪ್ರಾರ್ಥನಾಶೀಲ ಮನುಷ್ಯನನ್ನು ಸರ್ವನಿಯಾಮಕನು ಸಂಕಟಗಳಿಗೆ ಸಿಲುಕದಂತೆ ಮೊದಲೆ ಪಾರುಮಾಡುವನು. ಆದರೆ ಸಂಕಟಗಳು ಬಂದೇಬಿಟ್ಟರೂ ಅವನು ತನ್ನ ದೈವಕ್ಕಾಗಿ ಶೋಕಿಸುವದಿಲ್ಲ. ಬಂದುದನ್ನೆಲ್ಲ ಅವಿಚಲ ಶಾಂತ ಚಿತ್ತದಿಂದಲೂ ಆತನ ಇಚ್ಛೆಯೆಂಬ ಸಂತುಷ್ಟ ವೈರಾಗ್ಯದಿಂದಲೂ ಸಹಿಸಿಕೊಳ್ಳುವನು."

### ಒಂದು ಸಂಕೇತ

ಗಾಂಧೀಜಿಯ ಭರವಸೆಯ ಬೋಧೆಯನ್ನು ಖಚಿತಗೊಳಿಸಲು, ದೇವರು ಕಾಯುವವನನ್ನು ಯಾವ ಪಾರ್ಥಿವ ಶಕ್ತಿಯೂ ನೋಯಿಸಲಾರದೆಂಬ ವಿಶ್ವಾಸಕ್ಕೆ ಸಾಕ್ಷಿ ಸ್ವರೂಪವಾಗಲು, ಒಂದು ಸಂಕೇತ ಅಥವಾ ನಿದರ್ಶನ ಬೇಕಾಗಿದ್ದರೆ, ಅದು ಪುಣೆಗೆ ನಮ್ಮ ಮರುಪಯಣದ ಕಾಲದಲ್ಲಿ ದೊರೆಯಿತು. ಸರಿ ರಾತ್ರಿ ಕಳೆದು ತುಸು ಹೊತ್ತಾಗಿತ್ತು, ನೇರಳ ಮತ್ತು ಕರಜತ ನಿಲ್ದಾಣಗಳ ನಡುವೆ ಭರದಿಂದ ಸಾಗುತಿದ್ದ ಗಾಂಧೀಜಿಯ ವಿಶೇಷ ರೇಲು ಗಾಡಿ ಒಮ್ಮಿಂದೊಮ್ಮೆ ರೇಲು ಹಳಿಗಳ ಮೇಲೆ ಒಟ್ಟಲ್ಪಟ್ಟಿದ್ದ ಬಂಡೆಗಲ್ಲುಗಳ ಮೇಲೆ ಹಾಯ್ದು ತತ್ತರಿಸಿಬಿಟ್ಟಿತು. ಆ ಕಲ್ಲುಗಳನ್ನು ಬೇಕೆಂದೇ, ಗಾಡಿಯನ್ನು ಉರುಳಿಸುವಗೋಸುಗವೇ ಅಲ್ಲಿ ಇಟ್ಟಿಂತಿತ್ತು. ಹಿಂದಿನ ಡಬ್ಬಿಯಲ್ಲಿದ್ದ ಡಾಯನೆಮೋ ಕೆಟ್ಟು ಹೋಯಿತಲ್ಲದೆ ಎಂಜಿನ್ನಿಗೂ ಹಾನಿಯಾಯಿತು. ಡ್ರಾಯವ್ಹರನು ಪ್ರಸಂಗಾವಧಾನವನ್ನು ತೋರಿಸಿ ಸಕಾಲದಲ್ಲಿ ಗಾಡಿಯನ್ನು ನಿಲ್ಲಿಸಿರದಿದ್ದರೆ ಇಡಿ ಗಾಡಿಯೂ ಹಳಿ ಬಿಟ್ಟು ಪ್ರವಾಸಿಗಳೆಲ್ಲರೂ ಅಂತರಾಳದಲ್ಲಿ ಚೆಲ್ಲಲ್ಪಡುತಿದ್ದರು. ಸುದೈವದಿಂದ ಗಾಡಿ ಹಳಿ ತಪ್ಪಲಿಲ್ಲ ತಾತ್ಕಾಲಿಕ ದುರಸ್ತಿಗಳ ನಂತರ ಅದು ತನ್ನ ಪ್ರಯಾಣವನ್ನು ಮುಂದುವರಿಸಲು ಶಕ್ತವಾಯಿತು ರಾತ್ರಿ ಎರಡು ತಾಸಿಗೂ ಹೆಚ್ಚುಸಮಯ ಮುರಿದ ಭಾಗಗಳನ್ನು ಸಡಿಲಿಸಿ ಒಗೆಯುತ್ತ ಕೊಡತಿಗಳು ಠಣ್ ಠಣ್ಣೆಂದು ಸದ್ದು ಮಾಡುತಿದ್ದಾಗ ಗಾಂಧೀಜಿ ನಿಷ್ಕಲ್ಮಷರಿಗೆ ಮಾತ್ರ ಲಭ್ಯವಾದ ಪ್ರಶಾಂತ ನಿದ್ರೆಯಲ್ಲಿ ಮಗ್ನರಾಗಿದ್ದರು. ಕೊಡತಿ ಸದ್ದಿನ ಪರಿವೆ ಅವರಿಗಿದ್ದೇ ಇಲ್ಲ. ಮುಂಜಾನೆ ಎದ್ದಾಗ, ರಾತ್ರಿ ಸಂಭವಿಸಿದ ಸಂಗತಿ ಗೊತ್ತಿದೆಯೇ ಎಂದು ಕೇಳಿದರೆ ಅವರು ಚೋದ್ಯಪಟ್ಟರು. "ಅಂ? ನನಗೆ ಗೊತ್ತೇ ಆಗಲಿಲ್ಲವಲ್ಲ!" ಎಂದಿಷ್ಟೆ ಅವರು ನುಡಿದುದು.

ಈ ಘಟನೆಯುನ್ನು ಕುರಿತು ತಮಗೆ ಅನಿಸಿದ್ದನ್ನು ಅವರು ಪುಣೆಯಲ್ಲಿ ಜರಗಿದ ಮೊದಲನೆ ಪ್ರಾರ್ಥನಾಕೂಟದಲ್ಲಿ ವಿವರಿಸುತ್ತ ಅವರು ಹೇಳಿದ್ದು— "ಕರುಣಾಳು ಸರ್ವಶಕ್ತನು ಮೃತ್ಯುವಿನ ದವಡೆಯೊಳಗಿಂದ ನನ್ನನ್ನು ಪಾರುಮಾಡಿದ್ದು ಇದು ಬಹುಶಃ ಏಳನೆಯ ಬಾರಿಯಿರಬೇಕು. ನಾನು ಯಾರನ್ನೂ ನೋಯಿಸಿಲ್ಲ. ಯಾರಲ್ಲಿಯೂ ಹಗೆತನವನ್ನು ಇಟ್ಟುಕೊಂಡಿಲ್ಲ. ನನ್ನ ಪ್ರಾಣವನ್ನು ತೆಗೆಯಬೇಕೆಂದು ಯಾರಾದರೂ ಏಕೆ ಬಯಸಬೇಕಾಗಿತ್ತೋ ಅದೀಗ ನನ್ನ ತಿಳಿವಳಿಕೆಗೆ ನಿಲುಕದ ಸಂಗತಿ. ಆದರೆ ಜಗತ್ತಿನ ರೀತಿ ಅದು. ಮನುಷ್ಯನು ಹುಟ್ಟಿದ್ದೇ ಅಪಾಯ ಗಂಡಾಂತರಗಳ ನಡುವೆ ಬಾಳಲೆಂದು. ಮನುಷ್ಯನ ಜೀವನವೇ ಜೀವನ ಮರಣಗಳ ದ್ವಂದ್ವ ಶಕ್ತಿಗಳ ನಡುವಿನ ಕೊನೆಯಿರದ ಒಂದು ಹೋರಾಟ. ಹೀಗಿದ್ದರೂ ಈ ಕೊನೆಯ ಘಟನೆಯಿಂದ ೧೨೫ ವರ್ಷ ಬಾಳುವ ನನ್ನ ಆಶೆ ಇನ್ನಷ್ಟು ಗಟ್ಟಿಯಾಗಿದೆ. ರಾಮನಾಮವೊಂದೇ ನನ್ನ ಬಲ, ನನಗೆ ಶರಣ್ಯ. ನಾನು ನಿಮ್ಮಗಳ ಸೇವೆಯನ್ನು ಇನ್ನೂ ಮಾಡುತ್ತ ಇರಬೇಕೆಂಬ ಬಯಕೆ ನಿಮಗಿದ್ದರೆ ಅವನ ನಾಮವನ್ನು ಧ್ಯಾನಿಸುತ್ತ ಅವನನ್ನು ನಿಮ್ಮ ಹೃದಯ ಪೀಠಗಳಲ್ಲಿ ಪ್ರತಿಷ್ಠಿಸಿಕೊಳ್ಳಬೇಕು. ದೇವರು ನಮಗಾಗಿ ಡೊಂಕಿದ್ದುದನ್ನು ನೀಟವಾಗಿ ಮಾಡುವನು. ಎಲ್ಲವೂ ಪೂರ್ಣ ಹದಗೆಟ್ಟಂತೆ ತೋರುತಿರುವಾಗ ಅವನು ಅದನ್ನು ಸರಿದಾರಿಗೆ ತಿರುಗಿಸುವನು."

ಪುಣೆ —ಪ್ಯಾರೇಲಾಲ

೩೦—೬—೪೬

## ಗುರುದೇವನ ವೇದನೆ

ಗುರುದೇವ ರವೀಂದ್ರರ ಈ ಕೆಳಗಿನ ಗೀತ— ಅದರ ಮೂಲ ಇಂಗ್ರೇಜಿ ಹಸ್ತಪ್ರತಿಯನ್ನು ಶ್ರೀ ಅಮಿಯ ಚಕ್ರವರ್ತಿಯವರು ರತ್ನದಂತೆ ಜೋಪಾನವಾಗಿಟ್ಟಿದ್ದಾರೆ— ಇಂದಿನ ನಮ್ಮ ಕ್ಷಾಮಪೀಡಿತ ದೇಶಕ್ಕೆ ಚನ್ನಾಗಿ ಅನ್ವಯಿಸುತ್ತದೆ:—

ದುರ್ಬಲ ಕೃಶ, ಗೃಹ ವಿರಹಿತ
ದೀನರು ಕೈಯೆತ್ತುತವರು
ಗಗನಕೆ; ಜಪಿಸುವರೊದರುತ-
ರಾ ದೇವನ ಹೆಸರನು.
ಅವರ ಕುರೆಯು ಕವಡಾಗದು—
ಈ ಪಾವನ ಭುವಿಯಲಿ:
ಮನುಜ ಹೃದಯದಿಂದುದಾತ್ತ
ಸೇವೆ, ಪ್ರೇಮ ರೂಪದಿ
ಕರುಣಾಕರ ಪರಮಾತ್ಮನು
ಓಗುಡುವೀ ದೇಶದಿ.

ಇಂಗ್ಲೀಷ ಬಲ್ಲವರಿಗಾಗಿ ಇಂಗ್ಲೀಷಿನಲ್ಲಿ ಕವೀಂದ್ರನು ತನ್ನ ಅಂತರಂಗದ ವೇದನೆಯನ್ನು ಶಬ್ದಗಳಲ್ಲಿ ನೇಯ್ದಿದ್ದಾನೆ. ಅವರು "ಉದಾತ್ತ ಸೇವೆ ಪ್ರೇಮ" ಗಳ ಈ ಕರೆಯನ್ನು ಅರ್ಥ ಮಾಡಿಕೊಳ್ಳುವರೆ ?

ಪುಣೆ —ಅ. ಕೌ.

೨೦—೬—೪೬

## ಕೊಲ್ಲುವುದೇಕೆ ?

ಅಲೀಗಡದಿಂದ ಕೆಳಗಿನ ಸೂಚನೆ ಬಂದಿದೆ.

ಬೆಳೆಗಳನ್ನು ನಾಶಮಾಡುವಂಥ ಮಂಗಗಳು, ಪಕ್ಷಿಗಳು ಮತ್ತು ಪ್ರಾಣಿಗಳನ್ನು ನಾವು ಕೊಲ್ಲತಕ್ಕದ್ದು. ಇಲ್ಲವೆ ನಮ್ಮ ಸಲುವಾಗಿ ಅವನ್ನು ಕೊಲ್ಲುವಂಥವರನ್ನಾದರೂ ಇಡತಕ್ಕದ್ದು" ಎಂದು ನೀವು ಬರೆಯುವಿರಿ. ಬೇರೆ ಸಾಧನಗಳಿಂದ ಬೆಳೆಗಳನ್ನುಳಿಸುವುದು ಸಾಧ್ಯವಿದ್ದರೆ ಕೊಲ್ಲುವುದು ಆವಶ್ಯವೆನಿಸಲಾರದೆಂದು ನಾನು ಹೇಳಬಯಸುತ್ತೇನೆ. ರಾತ್ರಿಯಲ್ಲಿ ಉಗ್ರವಾದ ವಿದ್ಯುದ್ದೀಪವನ್ನಿಟ್ಟು ನಮ್ಮ ಕಕ್ಕನು ಮಂಗಗಳಿಂದ ಹೊಲಗಳ ರಕ್ಷಣೆ ಮಾಡಿಕೊಳ್ಳುವನು. ಈ ಮಾರ್ಗವನ್ನು ಹೆಚ್ಚು ವ್ಯಾಪಕ ರೀತಿಯಿಂದ ಪ್ರಯೋಗಮಾಡಿಕೊಳ್ಳಬಾರದೇಕೆ? ಮೇಲೆ ಮೇಲೆ ನೋಡುವದಕ್ಕೆ ಈ ಸೂಚನೆ ಆಕರ್ಷಕ ತೋರುತ್ತದೆ. ಆದರೆ ಆಳವಾಗಿ ವಿಚಾರ ಮಾಡಿ ನೋಡಿದರೆ ಅದು ಕಾರ್ಯಕಾರಿಯಾಗಲಾರದೆಂಬುದು ಕಂಡು ಬರುತ್ತದೆ. ಈ ರೀತಿಯಿಂದ ನಾನು ನನ್ನ ಸ್ವಂತ ಹೊಲವನ್ನು ರಕ್ಷಿಸಿಕೊಳ್ಳಬಲ್ಲೆನು. ಆದರೆ ಸುತ್ತಲಿರುವವರ ಗತಿಯೇನು? ಎರಡನೆಯವರನ್ನು ಹಾನಿಗೆ ಗುರಿ ಮಾಡಿ ಸ್ವಾರ್ಥದಿಂದ ನನ್ನ ಬೆಳೆಗಳನ್ನುಳಿಸುವುದಕ್ಕೆ ನನಗೇನು ಅಧಿಕಾರವಿದೆ? ಅಹಿಂಸೆಯ ಹೆಸರಿನಲ್ಲಿ ಇದೊಂದು ಬಗೆಯ ಹಿಂಸೆಯೆ. ಉದಾಹರಣೆಗಾಗಿ ನಾವು ಅಂಗಳದಲ್ಲಿದ್ದ ಹಾವನ್ನು ಇಲ್ಲವೆ ಬೇರೆ ಹೊಲಸನ್ನು ಸ್ವಲ್ಪವೂ ವಿಚಾರ ಮಾಡದೆ ನೆರೆಯವರ ಹಿತ್ತಲಿನಲ್ಲಿ ಒಗೆಯುವೆವು. ಮಂಗಗಳ ಮತ್ತು ಅಂಥ ಇತರ ಪ್ರಾಣಿಗಳ ಕಿಡಿಗೇಡಿತನದಿಂದ ಸಮಾಜದ ಮತ್ತು ನಮ್ಮ ಸ್ವಂತದ ರಕ್ಷಣೆ ಮಾಡಿಕೊಳ್ಳಬೇಕಾದರೆ ನಾವವನ್ನು ಕೊಲ್ಲಲಿಕ್ಕೆಬೇಕಾಗುವದು. ಇದೇ ನಿಜವಾದ ಅಹಿಂಸೆ. ಶಕ್ಯವಿದ್ದ ಮಟ್ಟಿಗೆ ನಾವು ಹಿಂಸೆಯನ್ನು ಬಿಟ್ಟುಗೊಡತಕ್ಕದ್ದೆಂಬುದೆ ಸಾಮಾನ್ಯ ನಿಯಮವು. ವ್ಯಕ್ತಿಗಳ ಅಹಿಂಸೆ ಸಾಮಾಜಿಕ ಅಹಿಂಸೆಯಿಂದ ಭಿನ್ನವಾಗಿರುವುದು ಸ್ವಾಭಾವಿಕ. ಸಮಾಜವನ್ನು ಬಿಟ್ಟು ಸ್ವತಂತ್ರವಾಗಿರುವವನು ಎಲ್ಲ ಬಗೆಯ ಮುಂಜಾಗ್ರತೆಯನ್ನು ಬಿಟ್ಟುಗೊಡಬಹುದು. ಆದರೆ ಸಮಾಜವನ್ನೆ ಅವನು ಬಿಟ್ಟುಗೊಡಲರಿಯನು.

೩೦—೬—೪೬ ಮೋ. ಕ. ಗಾಂಧಿ

( ಹರಿಜನಸೇವಕದಿಂದ )



# ಕರ್ನಾಟಕ

## ಧಾರವಾಡ

ದಿ ಸೆಂಟನರಿ ಕ್ರಿಶ್ಚನ್ ಅಸೋಸಿಯೇಶನ ಹುಬ್ಬಳ್ಳಿ ಇದರ ವಾರ್ಷಿಕ ಸಭೆ ಹುಬ್ಬಳ್ಳಿಯಲ್ಲಿ ಶ್ರೀ ಮೋಡಕರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ಆ ಕಾಲಕ್ಕೆ ಕೈಗಾರಿಕೆ ಪ್ರದರ್ಶನವೊಂದನ್ನೂ ಏರ್ಪಡಿಸಲಾಗಿತ್ತು.

ಬೆಲವಂತರದ ಹಿರೇಮಠ ಚನ್ನಬಸವೇಶ್ವರ ಶಿವಯೋಗಿಗಳ ೧೧ ನೆಯ ಪುಣ್ಯತಿಥಿ ೨೭ ನೆಯ ತಾರೀಕಿನಲ್ಲಿ ಮಠಾಧ್ಯಕ್ಷರಾದ ಶ್ರೀ ಸಿದ್ಧರಾಮೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ಮೆರವಣಿಗೆ ಅನ್ನ ಸಂತರ್ಪಣೆ ಶ್ರೀ ವಿರುಪಾಕ್ಷಶಾಸ್ತ್ರಿಗಳ ಕೀರ್ತನೆ ಮೊದಲಾದ ಕಾರ್ಯಕ್ರಮಗಳಿಂದ ಜರುಗಿತು.

ಹೊಂಬಳದಲ್ಲಿ ಶ್ರೀ ವಿದ್ಯಾರಣ್ಯ ಪುಣ್ಯತಿಥಿ ನಿಮಿತ್ತ ಅವರ ಪಂಚದಶಿ ಗ್ರಂಥದ ಪ್ರವಚನವಾಯಿತು. ಗದುಗಿನ ಶ್ರೀ ಬಳವಂತರಾವ ದೀಕ್ಷಿತರು ವಿದ್ಯಾರಣ್ಯರೂ ಅಧ್ಯಾತ್ಮಭೂಮಿಕೆಯಲ್ಲಿ ಅವರ ಕಾರ್ಯಗಳೂ ಎಂಬ ವಿಷಯದ ಮೇಲೆ ಭಾಷಣ ಮಾಡಿದರು.

ರಾಣೇಬೆನ್ನೂರಿಂದ ಮೈಸೂರ ಹದ್ದಿಗೆ ಕೆಲವು ಚೀಲ ಶೇಂಗಾ ಕಾಳು ಕಳಿಸುವ ವ್ಯಾಪಾರಿಗಳಿಗೆ ಸಹಾಯ ಮಾಡಿದ ಬಗ್ಗೆ ಶ್ರೀ ನಾಡಕರ್ಣಿ ಫೌಜದಾರ ಶ್ರೀ ಬಾಡಕರ ಶಿರಸ್ತೇದಾರ ಇಬ್ಬರು ಪೋಲೀಸರು ಮತ್ತು ಕೆಲವು ವ್ಯಾಪಾರಿಗಳಿಗೆ ದಂಡವಾದ ಬಗ್ಗೆ ನಡೆದ ಅಪೀಲ ಖಟ್ಲೆಯಲ್ಲಿ ಧಾರವಾಡಜಿಲ್ಲಾ ನ್ಯಾಯಾಧೀಶರು ಎಲ್ಲರನ್ನು ನಿರ್ದೋಷಮುಕ್ತ ಮಾಡಿದರು.

ಗದಗ ಸೀದಾಧಿಕಾರಿಗಳಾಗಿದ್ದ ಶ್ರೀ ಜಿ ಜಿ. ಪುರಾಣಿಕರಿಗೆ ಧಾರವಾಡಕ್ಕೆ ವರ್ಗವಾದ್ದರಿಂದ ಅಧಿಕೃತ ಸೀದಾ ಅಂಗಡಿಯವರು ನ್ಯಾಯಾಧೀಶ ಶ್ರೀ ಖಟಾವಕರರ ಅಧ್ಯಕ್ಷತೆಯಲ್ಲಿ ಬೀಳ್ಕೊಡುವ ಸಮಾರಂಭವನ್ನೇರ್ಪಡಿಸಿದ್ದರು. ಸೀದಾಅಂಗಡಿಕಾರ ಸಂಘದ ಅಧ್ಯಕ್ಷ ಶ್ರೀ ನವಲಿ ಗೋಪಾಳರಾಯರು ಭಾಷಣ ಮಾಡುತ್ತ ಶ್ರೀ ಪುರಾಣಿಕರ ಗುಣಗಾನ ಮಾಡಿದರು.

ಮುಳಗುಂದದಲ್ಲಿ ರಾಷ್ಟ್ರಸೇವಾದಲದ ಶಾಖೆಯೊಂದು ಸ್ಥಾಪಿತವಾಗಿದೆ. ಭೋಜಪ್ಪನವರ ಹಸ್ತದಿಂದ ಅದರ ಉದ್ಘಾಟನ ಸಮಾರಂಭ ಜರುಗಿತು ಸುಮಾರು ೩೦ಜನ ಸ್ವಯಂಸೇವಕರಿದ್ದಾರೆ

ಧಾರವಾಡದಲ್ಲಿ ೧೯೨೧ ರ ಜುಲೈ ೧ ನೇ ತಾರೀಕಿನ ದಿನ ಸಂಭವಿಸಿದ ಗೋಳೀಬಾರಿನ ಸ್ಮರಣದಿನವೆಂದು ಧಾರವಾಡ ಅಕ್ಕಿಪೇಟೆಯಲ್ಲಿ ೧ನೇ ತಾರೀಕು ಶ್ರೀ ಬುರ್ಲಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು ಆ ಗೋಳೀಬಾರ್ ಪ್ರಕರಣದಲ್ಲಿ ಶಿಕ್ಷೆ ಅನುಭವಿಸಿದ ಶ್ರೀ ನರಸಿಂಗರಾವ ಭಿಸೆಯವರು ಮಾತಾಡಿ ಆ ದಿನದ ಸ್ಮರಣವನ್ನು ಮಾಡಿದರು. ಅನಂತರ ಗುಂಡಿಗಾಹುತಿಯಾದ ಮೂವರು ಮುಸಲ್ಮಾನರ ಸಮಾಧಿಗಳಿಗೆ ಪೂಮಾಲೆಗಳನ್ನರ್ಪಿಸಲಾಯಿತು.

ಹುಬ್ಬಳ್ಳಿ ನಗರದ ಫೌಜದಾರರಾದ ಶ್ರೀ ಎಸ್. ಎ. ಕುಲಕರ್ಣಿಯವರು ೧ನೇ ತಾರೀಕು ಹಳೆಹುಬ್ಬಳ್ಳಿಯಲ್ಲಿರುವ ಇಮಾಮಸಾಹೇಬ ತೆಂಕೆ ಎಂಬವರ ಮನೆ ಮುತ್ತಿ ಅಲ್ಲಿ ಜೂಜಾಡುತಿದ್ದ ೨೩ ಜನರನ್ನು ಹಿಡಿದಿರುವರು. ೧೫೦ ರೂ. ಸಿಕ್ಕಿರುವವು.

## ವಿಜಾಪುರ

ವಿಜಾಪುರ ಜಿಲ್ಲಾ ಕಾಂಗ್ರೆಸ ಕಮೀಟಿಯ ಸಭೆ ಸೇರಿ ಶ್ರೀ ದುಬೆಯವರು ಅಧ್ಯಕ್ಷರಾಗಿಯೂ ಶ್ರೀ ಬಿ. ಟಿ. ಮುರನಾಳ ಮತ್ತು ಶರಣಯ್ಯನವರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟರು. ಜಿಲ್ಹೆಯಲ್ಲಿಯ ಲಂಚಗುಳಿತನವನ್ನು ನಿರ್ಮೂಲಗೊಳಿಸಲು ನಾಲ್ವರು ಎಂ ಎಲ್ ಎ ಗಳ ಸಮಿತಿ ನೇಮಿಸಲಾಯಿತು. ಜಿಲ್ಹೆಯಲ್ಲಿ ನೀರಾವರಿ ಮತ್ತು ಕುಡಿಯುವ ನೀರಿನ ಸಂಬಂಧದಲ್ಲಿ ಪ್ರಯತ್ನ ಮಾಡಲು ಶ್ರೀ ಕಂಠಿಯವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದು ನೇಮಕವಾಯಿತು. ಶ್ರೀ ಜೋರಾಪುರ ಗುರುರಾಯರು ಕಾರ್ಯದರ್ಶಿಗಳು.

ಲಂಚ ತಿಂದು ಶಿಕ್ಷೆಗೊಳಗಾದ ಪೋಲೀಸ ಇನಸ್ಪೆಕ್ಟರ ಎಸ್. ಜಿ. ಪಾಟೀಲರು ವಿಜಾಪುರ ಸಿಟಿ ಮ್ಯಾಜಿಸ್ಟ್ರೇಟರ ತೀರ್ಪಿನ ವಿರುದ್ಧ ಮಾಡಿಕೊಂಡ ಅಪೀಲನ್ನು ಕಿತ್ತಿ ಹಾಕಲಾಗಿದೆ. ಇವರಿಗೆ ಹೆಚ್ಚಿನ ಶಿಕ್ಷೆಯಾಗಬೇಕೆಂದು ಮಾಡಿಕೊಂಡ ಬಿನ್ನಹದ ತೀರ್ಪು ಇನ್ನೂ ಆಗಿಲ್ಲ.

ವಿಜಾಪುರ ಜಿಲ್ಲಾ ಕಲೆಕ್ಟರರಾಗಿದ್ದ ಶ್ರೀ ಅಲಮೌಲಾ ಇವರು ಶ್ರೀ ಪಾರ್ಸಿಯಾ ಇವರಿಗೆ ಅಧಿಕಾರ ಒಪ್ಪಿಸಿದರು.

ವಿಜಾಪುರ ಜಿಲ್ಹಾ ಲೋಕಲ್ ಬೋರ್ಡ ಮತ್ತು ಸ್ಕೂಲ ಬೋರ್ಡಗಳ ಸಭೆ ಜೂನ ೨೯—೩೦ ಕ್ಕೆ ಸೇರಿ ನೌಕರರಿಗೆ ಹೆಚ್ಚಿನ ತುಟ್ಟಿ ಭತ್ತೆ ಕೊಡಬೇಕೆಂದು ನಿರ್ಣಯಿಸಲಾಯಿತು. ಬೋರ್ಡಿನ ನೌಕರರು ಸಂಪು ಹಿಂತೆಗೆದುಕೊಂಡಿದ್ದಾರೆ.

## ಬೆಳಗಾವಿ

ಬೆಳಗಾವಿ ಜಿಲ್ಹೆಯಲ್ಲಿ ಹೊಸ ಧಾನ್ಯ ಬರುವದಕ್ಕೆ ಮೊದಲು ಸುಮಾರು ೫ ವಾರಗಳಿಗೆ ಬೇಕಾಗುವಷ್ಟು ಧಾನ್ಯ ಕಡಿಮೆ ಬೀಳುವದೆಂದು ಜಿಲ್ಹಾ ಕಲೆಕ್ಟರರ ಅಧ್ಯಕ್ಷತೆಯಲ್ಲಿ ಸೇರಿದ ಧಾನ್ಯ ಸಮಿತಿಯ ಸಭೆಯಲ್ಲಿ ಹೇಳಲಾಯಿತು.

ಬೆಳಗಾವಿ ಪೂರಯಿಕೆ ಸಲಹೆ ಸಮಿತಿಯ ಮೊದಲನೆ ಸಭೆ ಸೇರಿ ಶ್ರೀ ಅಣ್ಣಾ ಗುರುಜಿಯವರು ಉಪಾಧ್ಯಕ್ಷರಾಗಿಯೂ ಶ್ರೀ ದ. ಲ. ಅಧ್ಯಾಪಕರು ಪ್ರಾಂತಿಕ ಸಮಿತಿಯ ಸದಸ್ಯರಾಗಿಯೂ ಆರಿಸಲ್ಪಟ್ಟರು.

ಬೆಳಗಾವಿ ಜಿಲ್ಹೆಯ ಹಳ್ಳಿಗಳಲ್ಲಿ ಬಾಳಂತಿಯರಿಗೆ ಮತ್ತು ಹೆಣ್ಣುಮಕ್ಕಳಿಗೆ ಸ್ವಲ್ಪವೂ ಅಕ್ಕಿ ಸಿಕ್ಕುತ್ತಿಲ್ಲವಾದ್ದರಿಂದ ಬೆಳಗಾವಿ ನಾಗರಿಕರ ಅಕ್ಕಿ ಸೀದಾದಲ್ಲಿ ವಾರಕ್ಕೆ ಕಾಲುಶೇರು ಕಡಮೆ ಮಾಡಿ ಅದನ್ನು ಹಳ್ಳಿಗರಿಗಾಗಿ ಕೊಡಬೇಕೆಂದು ಆಹಾರ ಸಮಿತಿಯಲ್ಲಿ ನಿರ್ಣಯಿಸಲಾಯಿತು.

ಬರಗಾಲ ಕೆಲಸಗಳಲ್ಲಿ ದುಡಿವ ಕೆಲಸಗಾರರಿಗೆ ಕೊಡುವ ಕೂಲಿಯ ಕನಿಷ್ಠ ಪ್ರಮಾಣ ಕಡಿಮೆಯಾಗಿದೆಂದು ತಿಳಿಸಿದ ಮೇರೆಗೆ ಸರಕಾರದವರು ಕೆಲ ಭಾಗಗಳಲ್ಲಿ ಕೂಲಿ ದರಗಳನ್ನು ಏರಿಸಿದ್ದಾರೆ. ಗಂಡಸರಿಗೆ ಎಂಟಾಣೆ ಹೆಣ್ಣುಮಕ್ಕಳಿಗೆ ಎಂಟಾಣೆ ಮತ್ತು ಹುಡುಗರಿಗೆ ಆರಾಣೆ ದರ ಗೊತ್ತು ಮಾಡಿದ್ದಾರೆ. ಗಂಡಸರ ಕೂಲಿ ದರವನ್ನು ಇನ್ನೂ ಹೆಚ್ಚಿಸಬೇಕೆಂದು ಕೇಳಿಕೊಳ್ಳಲಾಗಿದೆ.

ಅಥಣಿ ಜೆ. ಎ. ಹಾಯಸ್ಕೂಲಿನವರು ಫೀ ದರವನ್ನು ಮಿತಿಮೀರಿ ಏರಿಸಿದರಲ್ಲದೂ ಕಟ್ಟಡ ನಿಧಿಯೆಂದು ಬೇರೆ ಹತ್ತು ರೂಪಾಯಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ವಸೂಲ ಮಾಡುತಿರುವರೆಂದು ತಕರಾರು ಮಾಡಿ ೨೯ ನೇ ತಾರೀಕಿನಿಂದ ವಿದ್ಯಾರ್ಥಿಗಳು ಸಂಪು ಹೂಡಿದ್ದಾರೆ. ಎಲ್ಲ ೬೦೦ ವಿದ್ಯಾರ್ಥಿಗಳೂ ಸಂಪಿನಲ್ಲಿ ಸೇರಿರುವರು.

ಬೆಳಗಾವಿಯ ಬೆಂಡಿ ಬಂಜಾರದಲ್ಲಿಯ ಬಟ್ಟೆ ವ್ಯಾಪಾರಿ ಶ್ರೀ ಖಟಾವಕರ ಇವರ ಅಂಗಡಿಯಲ್ಲಿ ೧೨ ಆಣೆ ಬೆಲೆಯ ಬಟ್ಟೆಯನ್ನು ೧-೨-೦ ಕ್ಕೆ ಮಾರಿದ ಆರೋಪದ ಮೇಲೆ ನಡೆದ ಖಟ್ಲೆಯಲ್ಲಿ ಆರೋಪಿಗಳಿಗೆ ೩ ತಿಂಗಳ ಸಶ್ರಮ ಶಿಕ್ಷೆ ಮತ್ತು ೫೦೦ ರೂಪಾಯಿ ದಂಡ ವಿಧಿಸಲಾಯಿತು.

ಬೆಳಗಾವಿಯಲ್ಲಿ ಲಂಚ ನಿರ್ಮೂಲನ ಕಾರ್ಯ ಜೋರಿನಿಂದ ಪ್ರಾರಂಭವಾಗಿದೆ. ಬೆಳಗಾವಿ ಸ್ಟೇಶನ್ ಪಾರ್ಸಲ್ ಕಾರಕೂನನೊಬ್ಬನು ಗುರುತು ಮಾಡಿದ ನೋಟು ತೆಗೆದುಕೊಳ್ಳುವಾಗ ಹಿಡಿಯಲ್ಪಟ್ಟನು.

ಬೆಳಗಾವಿ ೧ನೆ ವರ್ಗದ ಸಬ್ ಜಜ್ಜ ಕೋರ್ಟಿನ ಕ್ಲಾರ್ಕ ಅಫ ದಿ ಕೋರ್ಟ ಶ್ರೀ ನರಗುಂದ ಇವರ ಕಡೆಗೆ ಲಂಚ ಪ್ರತಿಬಂಧ ಖಾತೆಯ ಕೆಲ ಪೋಲೀಸರು ಹೋಗಿ ಕೆಲ ಕಾಗದ ಪತ್ರಗಳ ನಕಲು ಕೇಳಿದರಂತೆ. ಆದರೆ ಅವರು ಈಗ ಸವಡಿಲ್ಲೆಂದು ಹೇಳಿದರಂತೆ. ನಕಲು ಕೂಡಲೆ ಸಿಕ್ಕುವುದಕ್ಕಾಗಿ ೧೦ ರೂ. ನೋಟು ಕೊಟ್ಟರಂತೆ. ಈ ನೋಟು ಮುರಿಸಲಿಕ್ಕೆ ಹೋದಾಗ ಪೋಲೀಸರು ಹಿಡಿದರೆಂದು ತಿಳಿಯುತ್ತದೆ.

ಪೋಲಿಸ ಇನಸ್ಪೆಕ್ಟರ ಶ್ರೀ ಮಹಮ್ಮದ ಉಮ್ಮರ ಇವರು ಡಿ. ವಾಯ ಎಸ್. ಪಿ. ಗಳಾಗಿರುವರೆಂದು ಹೋದ ಸಲ ಪ್ರಸಿದ್ಧವಾಗಿತ್ತಷ್ಟೆ. ಆದರೆ ಗೃಹಮಂತ್ರಿಗಳು ಈ ಬಡತಿ ಹುಕುಮನ್ನು ತಾರಿನಿಂದ ತಡೆಹಿಡಿದಿರುವರೆಂದು ತಿಳಿಯುತ್ತದೆ.

## ಉತ್ತರಕನ್ನಡ

ಭಟಕಳದ ನಾಗರಿಕರೂ ಹಿಂದಿನ ಎಂ ಎಲ್ ಎ ಗಳೂ ಆಗಿದ್ದ ಶ್ರೀ ಅಯ ಎನ್ ಸಿದ್ದೀಕ ಇವರು ೧ ನೇ ತಾರೀಕು ಮುಂಜಾನೆ ೬ ಗಂಟೆಗೆ ಸ್ವರ್ಗಂಬರವಾಸಿಯಾದರು. ಇವರು ಹಿಂದೂ ಮುಸಲ್ಮಾನರಿಗೆ ಪ್ರಿಯರಾಗಿದ್ದರು.

ಹೊಸದಾಗಿ ಆರಿಸಲ್ಪಟ್ಟ ಉತ್ತರ ಕನ್ನಡ ಕನ್ನಡ ಜಿಲ್ಹಾ ಆಹಾರ ಸಮಿತಿಯ ಸಭೆ ಕಲೆಕ್ಟರರ ಅಧ್ಯಕ್ಷತೆಯಲ್ಲಿ ಸೇರಿ ಶ್ರೀ ಕೇಶವಾಯಿನ್‌ರು ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು.

'ನಾರ್ಥ ಕೆನರಾ ಫೀಶರೀಜ ಡೆವಲಪಮೆಂಟ ಕಮೀಟಿ ಮುಂಬಯಿ' ಈ ಸಂಸ್ಥೆಯ ಅಧ್ಯಕ್ಷರು ಕಾರ್ಯದರ್ಶಿಗಳು ಕಾರವಾರಕ್ಕೆ ಬಂದು ಈ ಸಂಸ್ಥೆಯ ಪ್ರಚಾರ ಕಾರ್ಯವನ್ನು ಮಾಡಹತ್ತಿರುವರು. ಈಗಾಗಲೆ ಅನೇಕರು ಇದರ ಪಾಲುಗಳನ್ನು ಕೊಂಡಿರುವರು.

ಉತ್ತರ ಕನ್ನಡ ಜಿಲ್ಹೆಯ ಯಾವದೇ ಭಾಗದಲ್ಲಿ ನರಳುತಿರುವ ಹಾಗೂ ಕೂಡಲೆ ಯೋಗ್ಯ ಶಸ್ತ್ರಚಿಕಿತ್ಸೆ ಇಲ್ಲವೆ ಔಷಧೋಪಚಾರ ಮಾಡಬೇಕಾದ ರೋಗಿಯನ್ನು ಬೇಗನೆ ಸಿವಿಲ್ ಆಸ್ಪತ್ರೆಗೆ ತರಲು ಅನುಕೂಲವಾಗಬೇಕೆಂದು ರೋಗಿವಾಹಕ ಗಾಡಿಗಳ ವ್ಯವಸ್ಥೆ ಮಾಡಿದ್ದು ಅವಶ್ಯಕರು ಇದರ ಲಾಭ ಪಡೆಯಬೇಕೆಂದು ಪ್ರಸಿದ್ಧಿಸಲಾಗಿದೆ.

ಕೊಲ್ಹಾಪುರ ಸಂಸ್ಥಾನ ಶಾಸನ ಸಭೆಯ ಅಂದಾಜ ಪತ್ರಿಕೆಯ ಅಧಿವೇಶನ ಪ್ರಾರಂಭವಾಗಿದೆ. ಮಂತ್ರಿಗಳು ಮಂಡಿಸಿದ, ಅಂದಾಜ ಪತ್ರಿಕೆಯಲ್ಲಿ ೧೨೩೯೫೦೦೦ ರೂಪಾಯಿ ಆದಾಯ ಮತ್ತು ೯೯೧೦೦೦೦ ರೂಪಾಯಿ ವೆಚ್ಚದ ಅಂಕಿಗಳು ಇವೆ. ವಿದ್ಯುತ್ ಸೌಕರ್ಯ ನೀರಾವರಿ ಯೋಜನೆಗಳಿಗಾಗಿ ಒಂದು ಕೋಟಿ ರೂಪಾಯಿ ಸಾಲ ತೆಗೆಯಬೇಕೆಂದು ಸಂಸ್ಥಾನ ಸರಕಾರದವರು ನಿರ್ಧರಿಸಿದ್ದಾರೆ

# ಹಿಂದುಸ್ತಾನ

## ಮುಂಬಯಿ

ಅಹಮದಾಬಾದ ನಗರ ಸಭೆಯ ಕಸ ಗೂಡಿಸುವವರ ಸಂಪು ೧೯ ದಿನಗಳ ನಂತರ ಹಿಂತೆಗೆದುಕೊಳ್ಳಲಾಯಿತು. ಕೆಲಸಗಾರರು ಕೆಲಸಕ್ಕೆ ಬಂದರು.

೧೯೪೦-೪೧ ರಲ್ಲಿ ನಡೆದ ವೈಯಕ್ತಿಕ ಸತ್ಯಾಗ್ರಹ ಚಳವಳಿಯಲ್ಲಿ ವಶಪಡಿಸಿಕೊಳ್ಳಲಾದ ಜಪ್ತ ಮಾಡಲಾದ ಇಲ್ಲವೆ ಸೀಲ ಮಾಡಲಾದ ಆಸ್ತಿಗಳನ್ನು ಹಿಂತಿರುಗಿ ಕೊಡಲು ಮುಂಬಯಿ ಸರಕಾರವು ನಿರ್ಧರಿಸಿದೆ. ಹಿಂಸಾತ್ಮಕ ಅಪರಾಧಗಳಿಗಾಗಿ ಕೋರ್ಟಿನಿಂದ ಜಪ್ತ ಮಾಡಲಾದ ಆಸ್ತಿಗಳನ್ನು ಹಿಂದಕ್ಕೆ ಕೊಡಲಾಗುವದಿಲ್ಲ.

ಸರ್ ಹರಿಲಾಲ ಕಾನಿಯ, ಇವರ ಸ್ಥಳದಲ್ಲಿ ನ್ಯಾ. ಆರ್ ಎಸ್ ಬಾವಡೇಕರ ಆಯ ಸಿ ಎಸ್ ಇವರು ಮುಂಬಯಿ ಹಾಯಕೋರ್ಟಿನ ನ್ಯಾಯಾಧೀಶರಾಗಿ ನೇಮಿಸಲ್ಪಟ್ಟಿರುವರು.

ನ್ಯಾ. ಶ್ಯಾಮರಾವ ರಘುನಾಥ ತೇಂಡೂಲಕರರನ್ನು ವಾಯಿಸರಾಯರು ೧೯೪೬ ನೇ ಫೆಬ್ರುವರಿ ೨೮ ರಿಂದ ಮುಂಬಯಿ ಹಾಯಕೋರ್ಟಿನ ಅಡಿಶನಲ್ ಜಜ್ಜರನ್ನಾಗಿ ನೇಮಿಸಿದ್ದಾರೆ.

ಅಮೇರಿಕೆಯ ಪ್ರಸಿದ್ಧ ಲೇಖಕರಾದ ಲುಯಿ ಫಿಶರರು ಹಿಂದುಸ್ತಾನಕ್ಕೆ ಬಂದಿದ್ದಾರೆ. ಅವರೀಗ ಪುಣೆಯಲ್ಲಿ ಮಹಾತ್ಮರಿದ್ದ ನೈಸರ್ಗಿಕ ಚಿಕಿತ್ಸಾಲಯ ಕೇಂದ್ರದಲ್ಲಿ ಬಿಡಾರ ಬಿಟ್ಟಿರುವರು.

ಮುಂಬಯಿ ಜಿ. ಆಯ. ಪಿ. ರೇಲ್ವೆ ವರ್ಕಶಾಪಿನಲ್ಲಿಯ ಮೇಲಿನ ಕೆಲ ಕೆಲಸಗಾರರ ಅಧಿಕಾರಾವಧಿ ಹೆಚ್ಚಿಸಿದ್ದರಿಂದ ೮೦೦೦ ಕೆಲಸಗಾರರು ೧ ನೇ ತಾರೀಕಿನಿಂದ ಧರಣಿ ಸಂಪು ನಡೆಸಿದ್ದಾರೆ.

ಮುಸಲ್ಮಾನರ ಪರವಾಗಿ ಮಾತಾಡುವ ಹಕ್ಕು ಮುಸ್ಲಿಂ ಲೀಗಿಗೆ ಇರುವುದಿಲ್ಲ. ಮುಸಲ್ಮಾನರ ಧ್ಯೇಯವು ಸ್ವಾತಂತ್ರ್ಯವಿದ್ದು ಪರಕೀಯ ದಾಸ್ಯ ಸ್ವೀಕಾರವು ಇಸ್ಲಾಮದ ತತ್ವದ ವಿರುದ್ಧ ಇರುವದು. ಮುಸ್ಲಿಂ ಲೀಗು ಇದು ವರೆಗೆ ಮುಸಲ್ಮಾನರ ಹಿತದ ಬಗ್ಗೆ ಏನನ್ನೂ ಮಾಡಿರುವದಿಲ್ಲ. ಹಿಂದುಗಳ ಹೆಗಲಿಗೆ ಹೆಗಲು ಹಚ್ಚಿ ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ಹೋರಾಡುವದೆ ಮುಸಲ್ಮಾನರ ಕರ್ತವ್ಯವಾಗಿದೆಂದು ಮುಂತಾಗಿ ಡಾ. ಸಯ್ಯದ ಹುಸೇನರು ರಾಷ್ಟ್ರೀಯ ಕಾರ್ಯಕರ್ತರನ್ನು ಬಿನ್ನವಿಸಿರುವರು.

ಯುರೋಪಿಯನ್‌ರ ಭ್ರಷ್ಟ ಅನುಕರಣ ಮಾಡಿ ಪರದೇಶವು ತಮ್ಮ ಮಾತೃಭೂಮಿಯೆಂದು ತಿಳಿಯದೆ ಅಂಗ್ಲೊ ಇಂಡಿಯನ್‌ರು ಹಿಂದುಸ್ತಾನವೆ ತಮ್ಮ ಮಾತೃಭೂಮಿಯೆಂದು ತಿಳಿಯತಕ್ಕದ್ದು ಎಂಬುದಾಗಿ ಮುಂಬಯಿ ಮುಖ್ಯ ಮಂತ್ರಿ ಶ್ರೀ ಬಾಳಾಸಾಹೇಬ ಖೇರರು ಮುಂಬಯಿ ಅಂಗ್ಲೊ ಇಂಡಿಯನ್ ಸಮಿತಿಯ ವಾರ್ಷಿಕಾಧಿವೇಶನದ ಕಾಲಕ್ಕೆ ಬಿನ್ನವಿಸಿದರು. ಅಂಗ್ಲೊ ಇಂಡಿಯನ್‌ರು ರೇಲ್ವೆ, ತಂತಿ ಖಾತೆ ಮತ್ತು ಪೋಲೀಸ ಮೊದಲಾದ ಕಾಯ್ದಿಟ್ಟ ಖಾತೆಗಳಲ್ಲಿಯೆ ಉಳಿಯದೆ ಹಿಂದುಸ್ತಾನದ ಒಕ್ಕಲತನ ಮತ್ತು ಉಳಿದ ವ್ಯವಸಾಯಗಳಲ್ಲಿ ತೊಡಗಬೇಕೆಂದು ಹೇಳಿದರು.

ಕೇಂದ್ರ ಶಾಸನ ಸಭೆಯ ಸದಸ್ಯರೂ ಕೂಲಿಕಾರ ಮುಖಂಡರೂ ಆಗಿರುವ ಮಣಿಬೇನ ಕಾರಾ ಇವರ ಮನೆಯ ಕಪಾಟಿನಲ್ಲಿದ್ದ ೧೦ ಸಾವಿರ ರೂಪಾಯಿ ಬೆಲೆಬಾಳುವ ವಜ್ರ ವೈಡೂರ್ಯಗಳು ಕಳವಾಗಿ ಹೋಗಿವೆಂದು ತಿಳಿಯುತ್ತದೆ. ಕಾರಾ ಇವರು ಕೆಲ ದಿನ ಊರಲ್ಲಿರಲಿಲ್ಲ. ಕಪಾಟು ಇದ್ದಕ್ಕಿದ್ದ ಹಾಗೆ ಇದೆ. ಆ ಕಪಾಟಿನ ಒಂದು ಕೀಲಿಕೈ ಮನೆಯ ಆಳಿನ ಕಡೆಗೆ ಇರುತಿದ್ದಿತಂತೆ.

## ಮಧ್ಯಪ್ರಾಂತ

ಕಳೆದ ಫೆಬ್ರುಅರಿಯಲ್ಲಿ ಜಬ್ಬಲಪುರ ಹಿಂದೀ ಸಿಗ್ನಲರರ ಶಿಕ್ಷಣ ಕೇಂದ್ರದಲ್ಲಿ ಸಂಭವಿಸಿದ ಬಂಡಾಯದ ಮುಖಂಡರೆಂದು ೨೦ ಜನರಿಗೆ ದಂಡವಿಧಿಸಿ ಕೋರ್ಟಿನಲ್ಲಿ ವಿಚಾರಣೆಗೆ ಗುರಿ ಮಾಡಲಾಗಿತ್ತು. ದಂಡಿನ ಕೋರ್ಟಿನ ಸಲಹೆಯನ್ವಯ ಈಗ ೩ ಜನರನ್ನು ನಿರ್ದೋಷಿಗಳನ್ನಾಗಿ ಬಿಟ್ಟು ಉಳಿದ ೧೫ ಆರೋಪಿಗಳ ಶಿಕ್ಷೆಯನ್ನು ಸ್ಥಿರಗೊಳಿಸಿದ್ದಾರೆ. ಇದರಲ್ಲಿ ೬ ಜನ ಸ್ತ್ರೀಯರ ಶಿಕ್ಷೆಯ ಅವಧಿಯನ್ನು ಕಡಿಮೆ ಮಾಡಿದ್ದಾರೆ.

ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರವೂ ರಾಷ್ಟ್ರೀಯ ಕಾರ್ಯಕರ್ತರ ಅವಶ್ಯಕತೆ ಇದ್ದೇ ಇರುವದು. ಇಲ್ಲಿ ಶಿಕ್ಷಣ ಪಡೆದವರು ಹಳ್ಳಿಗರ ಮಾರ್ಗದರ್ಶಕರಾಗಿ ಅವರಿಗೆ ಸೇವೆ ಸಲ್ಲಿಸಬೇಕೆಂದು ಮುಂತಾಗಿ ಶ್ರೀ ಕೃಷ್ಣದಾಸ ಜಾಜೂಜಿಯವರು ವರ್ಧಾ ಮಹಿಳಾಶ್ರಮದಲ್ಲಿ ಕಸ್ತೂರಬಾ ಗ್ರಾಮ ಸೇವಿಕಾ ವಿದ್ಯಾಲಯದ ಪ್ರಾರಂಭೋತ್ಸವ ಜರಗಿಸುವಾಗ ನುಡಿದರು.

## ಹೊಸದಿಲ್ಲಿ

ಮಹಾತ್ಮರು ಹೊಸದಿಲ್ಲಿಯಲ್ಲಿದ್ದಾಗ ವಾಸವಾಗಿದ್ದ ಭಂಗಿ ವಸತಿಯಲ್ಲಿ ಒಂದು ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ಸುಮಾರು ೧೫ ಕೋಣೆಗಳನ್ನು ಕಟ್ಟಿಸಲಾಗುವದು. ಮಹಾತ್ಮರು ದಿಲ್ಲಿಗೆ ಬಂದಾಗ ಅದನ್ನು ಅವರ ಉಪಯೋಗಕ್ಕಾಗಿ ಬಿಟ್ಟುಗೊಡಲಾಗುವದು. ಮತ್ತು ಅವರಿಲ್ಲದಾಗ ಹರಿಜನರ ಹಿತವರ್ಧನೆಯ ಕೇಂದ್ರವೆಂದು ಉಪಯೋಗಿಸಲಾಗುವದು.

ಅಂಚೇಖಾತೆಯ ಜನರ ಬೇಡಿಕೆಗಳನ್ನು ಮಧ್ಯಸ್ತಿಕೆಗೆ ಒಪ್ಪಿಸಿರುವದರಿಂದ ಅವರೀಗ ಸಂಪನ್ನು ಹೂಡುವದು ಅಕ್ರಮವೆಂದು ಅಂಚೇ ಖಾತೆಯ ಡಾಯರೆಕ್ಟರ ಜನರಲ್‌ರಾದ ಶ್ರೀ ಕೃಷ್ಣ ಪ್ರಸಾದರು ಅಭಿಪ್ರಾಯಪಟ್ಟಿದ್ದಾರೆ.

ಕೇಂದ್ರ ಸರಕಾರದವರು ನೇಮಿಸಿದ ಸಂಬಳ ಸಮಿತಿ ಸಭೆ ಜುಲೈ ಎರಡನೆಯ ವಾರದಲ್ಲಿ ದಿಲ್ಲಿಯಲ್ಲಿ ಕೂಡಲಿದೆ.

ಹಿಂದುಸ್ತಾನ ಸರಕಾರದ ಹಿಂದಿನ ರೇಲ್ವೆ ಮಂತ್ರಿಗಳಾಗಿದ್ದ ಸರ್ ಎಡ್ವರ್ಡ ಬೆಂಥಾಲರು ಜೂನ ೩೦ ಕ್ಕೆ ತಮ್ಮ ಅಧಿಕಾರ ಒಪ್ಪಿಸಿಕೊಟ್ಟು ಲಂಡನದ ಹಾದಿ ಹಿಡಿದರು.

ಸೈನ್ಯ ಖಾತೆಯಲ್ಲಿ ಬೇಗನೆ ಹಾಲಿನ ವಡಿಗಳನ್ನು ಪಯೋಗಿಸಲಾಗುವದಾದ್ದರಿಂದ ಪ್ರತಿಯೊಬ್ಬನಿಗೆ ಮೊದಲಿನ ಒಂದೂವರೆಪಟ್ಟು ಹಾಲು ಸಿಕ್ಕುವುದಲ್ಲದೆ ವೆಚ್ಚ ೨೦ ಲಕ್ಷ ರೂಪಾಯಿ ಕಡಮೆಯಾಗುವದೆಂದು ತಿಳಿಯುತ್ತದೆ.

## ಸಂಯುಕ್ತಪ್ರಾಂತ

ಒಕ್ಕಲತನ, ಗ್ರಾಮೋದ್ಯೋಗ ಗ್ರಾಮೋದ್ಧಾರ ಸಹಕಾರ ಮುಂತಾದ ವಿಷಯಗಳ ಬೆಳವಣಿಗೆಗಾಗಿ ಯುಕ್ತ ಪ್ರಾಂತ ಸರಕಾರ ಪ್ರತಿಯೊಂದು ಜಿಲ್ಹೆಗೂ ಒಬ್ಬ ಜಿಲ್ಹಾಧಿಕಾರಿಯನ್ನು ನೇಮಿಸುವದಿದೆಂದು ತಿಳಿಯುತ್ತದೆ. ಈ ಎಲ್ಲ ಖಾತೆಗಳ ಬೆಳವಣಿಗೆ ಒಬ್ಬರ ನಿಯಂತ್ರಣದಲ್ಲಿಯೆ ಸುಗಮವಾಗಿ ಸಾಗಬೇಕೆಂಬ ಉದ್ದೇಶದಿಂದ ಈ ಜಿಲ್ಹಾಧಿಕಾರಿಯನ್ನು ನೇಮಿಸಲಾಗಿದೆ.

ಪಂಡಿತ ಜವಾಹರಲಾಲರು ಕಾಶ್ಮೀರದ ಮಹಾರಾಜರಿಗೆ ಎರಡನೆ ಪತ್ರ ಬರೆದು ಕಾಶ್ಮೀರ ರಾಷ್ಟ್ರೀಯ ಚಳವಳಿಯ ಮುಖಂಡರಾದ ಶೇಖ ಅಬ್ದುಲ್ಲಾರ ಮತ್ತು ಇತರರ ಬಿಡುಗಡೆ ಮಾಡಬೇಕು. ಮತ್ತು ಘಟನಾ ಸಮಿತಿಗೆ ಸಂಸ್ಥಾನದ ಪ್ರತಿನಿಧಿಗಳನ್ನು ಆರಿಸುವಗೋಸುವ ಯೋಗ್ಯ ಚುನಾವಣೆ ನಡೆಸಬೇಕೆಂದು ಕೇಳಿಕೊಂಡಿರುವರು. ಈ ಪತ್ರಕ್ಕೆ ಏನು ಉತ್ತರ ಬಂದಿದೆಂಬುದು ತಿಳಿದಿಲ್ಲ.

ಐ. ಆಯ. ಸಿ ಸಿಯ ಮುಂಬಯಿ ಅಧಿವೇಶನ ಮುಗಿದ ಬಳಿಕ ಪಂಡಿತ ಜವಾಹರಲಾಲರು ಕಾಶ್ಮೀರಕ್ಕೆ ತೆರಳಲಿರುವರೆಂದು ತಿಳಿಯುತ್ತದೆ. ಶೇಖ ಅಬ್ದುಲ್ಲಾರ ಖಟ್ಲೆ ನಡೆಸುತ್ತಿದ್ದ ನ್ಯಾಯಾಧೀಶರು ಕಾಯಲೆ ಬಿದ್ದದ್ದರಿಂದ ೧ ನೇ ತಾರೀಕಿನಿಂದ ಪ್ರಾರಂಭವಾಗಲಿದ್ದ ಅವರ ಖಟ್ಲೆ ಮುಂದೆ ಬಿದ್ದಿದೆ.

ಸರ್ ತೇಜಬಹದ್ದೂರ ಸಪ್ರುರವರು ಜ್ವರದಿಂದ ಹಾಸಿಗೆ ಹಿಡಿದಿದ್ದಾರೆ ಅವರಿಗೆ ೧೦೨ ರ ವರೆಗೆ ಜ್ವರವಿರುವದು ಅವರು ಬಹಳ ಅಶಕ್ತರಾಗಿರುವರು.

## ಬಿಹಾರ

ಮೊಂಗೀರದಲ್ಲಿ ಜಾತೀಯದೊಂಬಿ ಸಂಭವಿಸಿ ಒಬ್ಬನು ಸತ್ತನಲ್ಲದೆ ಒಬ್ಬನಿಗೆ ತೀವ್ರ ಗಾಯಗಳಾಗಿವೆಂದು ಸುದ್ದಿ ಬಂದಿದೆ.

## ಮದ್ರಾಸ

ಗೋದಿ ಹಿಟ್ಟನ್ನು ಲೋಕಪ್ರಿಯ ಮಾಡಲು ಮತ್ತು ಎಲ್ಲ ವರ್ಗದವರಿಗೆ ಅದು ಸಿಕ್ಕುವಂತೆ ಮಾಡಲು ಮದ್ರಾಸ ಸರಕಾರದವರು ಅದರ ಧಾರಣೆಯನ್ನು ೧೪ ರೂ. ಮಣವಿದ್ದುದನ್ನು ೯ ರೂಪಾಯಿ ಮಣಕ್ಕಿಳಿಸಿದ್ದಾರೆ.

## ಸಿಂಧ

ದಿಲ್ಲಿಯಲ್ಲಿ ನಡೆದ ಬ್ರಿಟಿಶ ಭಾರತ ಮಾತುಕತೆಗಳ ಪರಿಣಾಮವೆ ರಾಷ್ಟ್ರೀಯ ಮುಸಲ್ಮಾನರು ಕೈಕೊಂಡ ಮಾರ್ಗವನ್ನು ಸ್ಪಷ್ಟವಾಗಿ ತೋರುತ್ತದೆಂದು ಸಿಂಧ ರಾಷ್ಟ್ರೀಯ ಮುಸಲ್ಮಾನ ಮುಖಂಡ ಖಾ. ಬ. ಮೌಲಾಬಕ್ಷರು ಹೇಳಿ ಬ್ಯಾ. ಜಿನ್ನಾ ಸಾಹೇಬರು ಸಿಂಧ ಮತ್ತು ಬಂಗಾಲಗಳಲ್ಲಿದ್ದ ಲೀಗ ಮಂತ್ರಿಮಂಡಲಗಳನ್ನು ಹಿಂತೆಗೆದುಕೊಳ್ಳಲೆಂದು ಹೇಳಿದರು.

ಸರ್ ರಾಮಸ್ವಾಮಿ ಮುದಲಿಯಾರ ಮತ್ತು ಡಾ. ವಿಜಯೀಂದ್ರರಾವ ಇವರು ಅಮೇರಿಕೆಯಿಂದ ೩೦ ಕ್ಕೆ ಕರಾಚಿಗೆ ಮರಳಿ ಬಂದರು.

ಕರಾಚಿಯಲ್ಲಿಯ ಪ್ರಾಥಮಿಕ ಶಾಲೆಯ ಸುಮಾರು ೨೦ ಸಾವಿರ ಚಿಕ್ಕಮಕ್ಕಳಿಗೆ ಪುಕ್ಕಟೆ ಮಧ್ಯಾಹ್ನದ ಊಟವನ್ನು ಕೊಡಬೇಕೆಂಬ ಠರಾವು ಕರಾಚಿ ಕಾರ್ಪೋರೇಶನದ ಸಭೆಯಲ್ಲಿ ಸ್ವೀಕೃತವಾಯಿತು.

ಕರಾಚಿ ಕಾರ್ಪೋರೇಶನದವರು ಮಾನಪತ್ರ ಕೊಡುವ ಪದ್ಧತಿಯನ್ನೆ ತೆಗೆದುಹಾಕಬೇಕೆಂದು ನಿರ್ಣಯಿಸಿದ್ದಾರೆ.

ಲೋಅರ ಸಿಂಧ ಬ್ಯಾರೇಜ ಯೋಜನೆಗೆ ಸಿಂಧ ಮಂತ್ರಿಮಂಡಳವು ಒಪ್ಪಿ ಪರದೇಶದಿಂದ ಯಂತ್ರ ಮುಂತಾದ್ದನ್ನು ತರಿಸಲು ೧೨೫೦೦೦೦೦ ರೂಪಾಯಿಗಳನ್ನು ಮಂಜೂರ ಮಾಡಲಾಯಿತು. ಈ ಯೋಜನೆ ೨೩ ಕೋಟಿ ರೂ. ದ್ದು ಇದ್ದು ೨೦ ಲಕ್ಷ ಎಕರೆ ಭೂಪ್ರದೇಶವು ಇದರಲ್ಲಿ ಬರುವದು. ನಾಲ್ಕು ವರ್ಷಗಳಲ್ಲಿ ಇದು ಕೊನೆಗೊಳ್ಳಬಹುದು. ಸುಮಾರು ೧೪೦೦೦ ಕಲಾಕುಶಲರು ಮತ್ತು ಇತರರು ಇದರಲ್ಲಿ ಕಾರ್ಯ ಮಾಡಬೇಕಾಗುವದಲ್ಲದೆ ಸುಮಾರು ೧೦೦೦ ಜನ ತಜ್ಞರು ಕೆಲಸ ಮಾಡುವರು.

## ಪಂಜಾಬ

ಸಂಸಾರದ ತಾಪತ್ರಯಗಳನ್ನು ಅನುಭವಿಸಲಾರದೆ ಲಾಹೋರದ ಒಂದು ಗುಜರಾಥಿ ಕುಟುಂಬವು ವಿಷ ತಿಂದು ಸತ್ತು ಬಿಡಬೇಕೆಂಬ ಪ್ರಯತ್ನದಲ್ಲಿ ಆ ಕುಟುಂಬದ ತಂದೆ ತಾಯಿ ಮತ್ತು ಮೂವರು ಮಕ್ಕಳು ಮಡಿದಿದ್ದಾರಂತೆ. ಈ ಕುಟುಂಬದ ಹಿರಿಯನು ಎಲ್ಲರಿಗೂ ವಿಷ ಹಾಕಿ ಟಾಯಿಪು ಮಾಡಿದ ಕಾಗದದಲ್ಲಿ ಎಲ್ಲವನ್ನೂ ಬರೆದಿಟ್ಟಿರುವನಂತೆ.

ಕಾಂಗ್ರೆಸ್ ಮುಖಂಡರೊಡನೆ ಮುಂಬಯಿಯಲ್ಲಿ ವಿಚಾರವಿನಿಮಯ ಮಾಡದೆ ಬ್ರಿಟಿಶ್ ರಾಯಭಾರದ ಘೋಷಣೆಯ ವಿರುದ್ಧ ದವುಡು ಹೂಡಲು ಶೀಖರಿಗೆ ಉಪದೇಶಿಸಲಾರೆನೆಂದು ಶೀಖ ಸರ್ವಾಧಿಕಾರಿ ಕರ್ನಲ್ ನಿರಂಜನ ಗಿಲ್ಲರು ಲಾಹೋರಿನಲ್ಲಿ ಪತ್ರಿಕಾ ಪರಿಷತ್ತಿನಲ್ಲಿ ಹೇಳಿದರು.

ಪಾಂಥಿಕ ಮಂಡಲದ ಪರವಾಗಿ ಕರ್ನಲ್ ಗಿಲ್ಲರು ಸ್ಪಷ್ಟೀಕರಿಸಿದ ಶೀಖ ಧೋರಣೆಗೆ ಮಾಸ್ತರ ತಾರಾಸಿಂಗರು ವಿರೋಧಕ ಭಾಷಣ ಮಾಡುತಿರುವರು. ಮಾಸ್ತರ ತಾರಾಸಿಂಗರಲ್ಲಿ ಹೋರಾಟ ಪ್ರಾರಂಭಿಸುವ ಶಕ್ತಿಯಿಲ್ಲ ನಿರರ್ಥಕವಾಗಿ ಶೀಖರನ್ನು ಅಡ್ಡದಾರಿ ಹಿಡಿಸುತಿರುವರೆಂದು ಮುಂತಾಗಿ ಶೀಖ ಧುರೀಣರಾದ ಬಾಬಾ ಖರಕಸಿಂಹರು ಅಭಿಪ್ರಾಯಪಟ್ಟಿದ್ದಾರೆ.

## ಬಂಗಾಲ—ಆಸಾಮ

ಕಲಕತ್ತೆಯಲ್ಲಿ ಅಕ್ಟೋಬರ ೨೧ ರಿಂದ ಸೇರಲಿರುವ ಹಿಂದ ರಾಷ್ಟ್ರೀಯ ಸೇನೆಯ ಪರಿಷತ್ತಿನ ಸ್ವಾಗತ ಸಮಿತಿಗೆ ಶ್ರೀ ಶರಚ್ಚಂದ್ರ ಬೋಸರು ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು. ೨೦ ಕ್ಕೆ ಸುಭಾಸ ಸೇನೆ ಮತ್ತು ಅಧಿಕಾರಿಗಳ ಮೆರವಣಿಗೆ ೨೧ ಕ್ಕೆ ನೇತಾಜಿ ಭವನದ ಉದ್ಘಾಟನೆ ರಾತ್ರಿ ನಗರದಲ್ಲೆಲ್ಲ ದೀಪೋತ್ಸವ ೨೨ ರಾತ್ರಿ ದೀವಟಿಗೆಗಳ ಮೆರವಣಿಗೆ ಕಾರ್ಯಕ್ರಮವಿದೆ.

ಹಿಂದ ರಾಷ್ಟ್ರೀಯ ಸೇನೆಯ ಪರಿಹಾರ ಸಮಿತಿಯ ಬಂಗಾಲ ಶಾಖೆಯವರು ಇದುವರೆಗೆ ೪೪೬೯೯೨ ರೂ. ಕೂಡಿಸಿದ್ದು ೧೨೮೦೬೧ ರೂಗಳನ್ನು ಅವರ ಪರಿಹಾರಕ್ಕಾಗಿ ವೆಚ್ಚಮಾಡಿದ್ದಾರೆ. ಮತ್ತು ೨ ಲಕ್ಷ ರೂಪಾಯಿಗಳನ್ನು ಕೇಂದ್ರ ಪರಿಹಾರ ಸಮಿತಿಗೆ ಕಳಿಸಿ ಕೊಡಲಾಗಿದೆಂದು ಪ್ರಸಿದ್ಧವಾಗಿದೆ.

ಬ್ರಿಟಿಶ್ ರಾಯಭಾರಿಗಳು ಭಾರತದ ದಲಿತ ವರ್ಗದವರ ಮೇಲೆ ಅಟಂ ಬಾಂಬನ್ನೆಸೆದು ಹೋದರು ಎಂದು ಡಾ. ಅಂಬೇಡಕರರು ಕಲಕತ್ತೆಯಲ್ಲಿ ಕೂಡಿದ ಒಂದು ಸಭೆಯಲ್ಲಿ ಹೇಳಿದರು. ಆರು ಕೋಟಿ ಜನರಿದ್ದ ಹರಿಜನರಿಗೆ ನಡುಗಾಲ ಸರಕಾರದಲ್ಲಿ ಒಂದೇ ಸ್ಥಳ ಕೊಟ್ಟದ್ದನ್ನು ಖಂಡಿಸುತ್ತ ದಲಿತ ವರ್ಗದವರು ರಾಜಕೀಯ ಅಧಿಕಾರ ದೊರಕಿಸಿಕೊಳ್ಳುವದಿದರ್ದೆ ಅವರ ಸರ್ವ ನಾಶ ಕಟ್ಟಿಟ್ಟದ್ದೆಂದು ಮುಂತಾಗಿ ಹೇಳಿದರು.

ಪ್ರಾಂತಗಳ ಗುಂಪಿನ ಯಾವ ಸಭೆಯಲ್ಲಿಯೂ ಆಸಾಮ ಶಾಸನ ಸಭೆಯ ಸದಸ್ಯರು ಭಾಗವಹಿಸದಂತೆಯೂ ಆಸಾಮವನ್ನೊಳಗೊಂಡ ಗುಂಪಿನ ಘಟನೆ ರಚಿಸಬೇಕೆಂಬ ಪ್ರಯತ್ನಗಳನ್ನು ವಿರೋಧಿಸುವಂತೆಯೂ ಒಂದು ಗೊತ್ತುವಳಿ ಬರುವ ಶಾಸನ ಸಭೆಯ ಅಧಿವೇಶನದಲ್ಲಿ ಬರಲಿರುವದು.

ಆಸಾಮ ಪ್ರಾಂತಿಕ ಮುಸ್ಲಿಂ ಲೀಗಿನ ಪ್ರಮುಖ ಕಾರ್ಯಕರ್ತ ಆಪ್ರುಜಬಕ್ತ ಎಂಬವರನ್ನು ರವಿವಾರ ರಾತ್ರಿ ಅವರ ಮನೆಯಲ್ಲಿಯೆ ಕೊಲೆ ಮಾಡಲಾಗಿದೆ ಪೋಲೀಸರು ಒಬ್ಬ ಮುಸಲ್ಮಾನನನ್ನು ಆರೋಪಿಯೆಂದು ಸೆರೆ ಹಿಡಿದು ಮುಂದಿನ ತಪಾಸಣೆ ಪ್ರಾರಂಭಿಸಿದ್ದಾರೆ. ಇವರು ಆಸಾಮದ ಸಾರ್ವಜನಿಕ ಕಾರ್ಯಕರ್ತರಿದ್ದರು.

ಕಲಕತ್ತೆಯಲ್ಲಿ ರಥಯಾತ್ರೆಯ ಮೆರವಣಿಗೆಯ ಮೇಲೆ ಕಲ್ಲುಗಳನ್ನೊಗೆದದ್ದರಿಂದ ಹಲವರಿಗೆ ಗಾಯಗಳಾದವು. ಮೂವರನ್ನು ಸೆರೆಹಿಡಿಯಲಾಗಿದೆ. ಕ್ಯಾಂಬೆಲ್ ಆಸ್ಪತ್ರಿಯ ಹತ್ತರವೂ ಅಂಗಡಿಕಾರರಲ್ಲಿ ಸ್ಥಳದ ಬಗ್ಗೆ ತಿಕ್ಕಾಟವಾಗಿ ಹಲವರಿಗೆ ಗಾಯಗಳಾದವು.

ಡಾಕಾದಲ್ಲಿಯ ಗಲಭೆಯುಂಟಾಗಿ ಶಾಂತತೆಯಾಗಿತ್ತು ಆದರೆ ಜುಲೈ ೧ ನೇ ರಾತ್ರಿ ಸಾದಾ ಉಡುಪಿನ ಪೋಲೀಸನೊಬ್ಬನನ್ನು ಗಾಯಗೊಳಿಸಲಾಯಿತು. ಹಿಂದಿನ ರಾತ್ರಿ ಗಾಯಗೊಂಡವನ್ನು ಆಸ್ಪತ್ರೆಯಲ್ಲಿ ಮರಣಹೊಂದಿದನು. ೮ ಜನ ಸೆರೆ ಹಿಡಿಯಲ್ಪಟ್ಟರು. ಒಟ್ಟು ಇಬ್ಬರು ಸತ್ತಿದ್ದು ೧೬ ಜನರಿಗೆ ಗಾಯಗಳಾಗಿವೆ.

ಬಂಗಾಲಕ್ಕೆ ಬ್ರಹ್ಮದೇಶದಿಂದ ಈ ತಿಂಗಳು ೯ ಸಾವಿರ ಟನ್ ಅಕ್ಕಿ ಬರುವದೆಂದು ಸಾರಲಾಗಿದೆ.





ಜೂನ ೩೦ ನೇ ತಾರೀಕು ಸುಮಾರು ೫-೩೦ ಗಂಟೆಗೆ ಢಾಕಾದಲ್ಲಿ ಬಂಧಮುಕ್ತ ಸೆಕ್ಯುರಿಟಿ ಕೈದಿಗಳಾದ ಬಾಬೂ ಪೂರ್ಣಚಂದ್ರದಾಸರ ಮೆರವಣಿಗೆ ಮಸೀದೆಯ ಹತ್ತರ ಬಂದ ಕೂಡಲೆ ಕೆಲ ಮುಸಲ್ಮಾನರು ವಾದ್ಯ ಬಾರಿಸುವದಕ್ಕೆ ವಿರೋಧ ಮಾಡಿ ಕಲ್ಲುಗಳನ್ನೊಗೆಯಹತ್ತಿದರು. ಆದರಿಂದ ಸಣ್ಣ ಪ್ರಮಾಣದಲ್ಲಿ ದೊಂಬಿ ಪ್ರಾರಂಭವಾಯಿತು. ಈಗ ದೊಂಬಿ ಶಾಂತವಾಗಿದೆ.

ಜಗತ್ಪ್ರಸಿದ್ಧ ಜಗನ್ನಾಥಪುರಿಯ ರಥೋತ್ಸವದಲ್ಲಿ ಪ್ರಾಂತದ ಗವರ್ನರರು ಮೊದಲನೆಯ ಸಲವೆ ತಮ್ಮ ಕೈಕೊಟ್ಟು ರಥೋತ್ಸವನ್ನು ಸಾಂಗಗೊಳಿಸಿದರು. ಓರಿಸಾದ ಗವರ್ನರ ಸರ್ ಚಂದೂಲಾಲ ತ್ರಿವೇದಿ ಸತಿಪತಿಗಳು ರಥೋತ್ಸವ ಸಾಂಗವಾಗುವವರೆಗೆ ಅಲ್ಲಿದ್ದರು. ಪುರಿಯ ರಥೋತ್ಸವದ ಇತಿಹಾಸದಲ್ಲಿಯೆ ಗವರ್ನರರು ಇಂತು ಸಮಾರಂಭ ಜರುಗಿಸಿದ್ದು ಇದೆ ಮೊದಲನೆ ಸಲ.

ಕ್ಯಾತ್ನಪ್ರದಲ್ಲಿ ಬೀದಿಯ ದೀಪಗಳನ್ನು ಸರಿಪಡಿಸಲು ಒಬ್ಬ ಮನುಷ್ಯನನ್ನು ನೇಮಿಸಲಾಗಿದ್ದು ಇನ್ನು ದೀಪಗಳ ವ್ಯವಸ್ಥೆ ಸರಿಗೊಳ್ಳುವದೆಂದೂ ಕಾಂಗ್ರೆಸ್ಸಿಗರ ಪ್ರಯತ್ನದಿಂದ ಹೆಂಡದಂಗಡಿಯು ಊರಿಂದ ದೂರ ಸಾಗಿಸಲಾಗಿದೆಂದೂ ಪಂಚಾಯತಿ ಅಧ್ಯಕ್ಷರು ತಿಳಿಸುತ್ತಾರೆ.

# ಮಿಸ್ಟರ್ ಹೂವರ್ ಇವರ ಸಲಹೆ

"ಸಮೀಪದ ಮುಂಬರುವ ದಿನಗಳ ಅಡಚಣೆಯ ಪರಿಸ್ಥಿತಿಯಲ್ಲಿ, ಭಾರತದ ಆಹಾರದ ಕೊರತೆಯುಳ್ಳ ಪ್ರದೇಶಗಳು, ಆಹಾರವನ್ನು ಒದಗಿಸಿಕೊಳ್ಳಲು ಸಾಧ್ಯವಾದಷ್ಟು ಇತರ ಎಲ್ಲಾ ಪ್ರದೇಶಗಳನ್ನು ಆಗ್ರಹಪಡಿಸಬೇಕು— ಆಸ್ಟ್ರೇಲಿಯಾ ಮತ್ತು ಸಯಾಂಗಳಿಂದಷ್ಟೆ ಅಲ್ಲದೆ ಭಾರತದಲ್ಲಿ ಹೆಚ್ಚಿನ ಆಹಾರವಿರುವ ಸ್ಥಳಗಳಿಂದಲೂ ಮುಂದೆ ತಿರುಗಿ ಕೊಡಲು ಒಪ್ಪಿ ಎರವಾಗಿ ಆಹಾರವನ್ನು ತೆಗೆದುಕೊಳ್ಳಬೇಕು"

ಅಮೇರಿಕಾದ ಮಾಜಿ ಅಧ್ಯಕ್ಷರಾದ ಮಿಸ್ಟರ್ ಹೂವರರು ಎಪ್ರಿಲ್ ೨೬ಕ್ಕೆ ಬೆಂಗಳೂರಿನಲ್ಲಿ ಕೊಟ್ಟ ಹೇಳಿಕೆ.

## ನಮ್ಮ ಪ್ರತಿಜ್ಞೆ ಮತ್ತು ಬಿನ್ನಹ

ಕೊರತೆಯ ಭಾಗಗಳಲ್ಲಿರುವವರಿಗೆ ನಾವು ಸಂಪೂರ್ಣ ಬೆಂಬಲ ನೀಡುವ ಬಗ್ಗೆ ಪ್ರತಿಜ್ಞೆ ಮಾಡುತ್ತೇವೆ. ದೇಶದ ಯಾವತ್ತೂ ಸಾಧನ ಸಾಮಗ್ರಿಯನ್ನು ಒಂದುಗೂಡಿಸಿ ಅವರಿಗೆ ತ್ವರಿತವಾಗಿ ನೆರವನ್ನು ನೀಡಲಾಗುತ್ತಿದೆ. ಅವರಿಗಿರುವ ಆಹಾರದ ಕೊರತೆಯಲ್ಲಿ ದೇಶದ ಉಳಿದ ಭಾಗವು ಪಾಲು ವಹಿಸುವದಲ್ಲದೆ ಸಮಪಾಲು ವಹಿಸುವದು. ಪ್ರತಿಯೊಬ್ಬನಿಗೆ ಯೋಗ್ಯ ಪ್ರಮಾಣದಲ್ಲಿ ಆಹಾರವು ದೊರೆಯುವಂತೆ ಮಾಡುವದಕ್ಕಾಗಿ ಶಿದಾ ಪದ್ಧತಿಯನ್ನು ವಿಸ್ತರಿಸಲಾಗುತ್ತಿದೆ. ಬೆಲೆ ನಿಯಂತ್ರಣವನ್ನು ತಪ್ಪದೆ ಸಾಗಿಸಲಾಗುವುದು. ಶಾಂತತೆ ಮತ್ತು ಆತ್ಮ ವಿಶ್ವಾಸದಿಂದ ನಡೆದುಕೊಳ್ಳಿರಿ. ನಿಮಗೆ ಅವಶ್ಯವಿರುವದಕ್ಕಿಂತ ಹೆಚ್ಚಿಗೆ ಕೊಂಡುಕೊಳ್ಳಬೇಡಿರಿ. ಲಾಭಬಡಕರೊಡನೆ ಯಾವದೇ ತರದ ಸಂಬಂಧವನ್ನಿಟ್ಟುಕೊಳ್ಳಬೇಡಿರಿ.

ಹೆಚ್ಚುಳಿದ ಭಾಗಗಳಲ್ಲಿರುವವರಿಗೆ ಸಂಪೂರ್ಣ ಸಹಾಯವನ್ನು ಒದಗಿಸಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ. ನಿಮ್ಮಲ್ಲಿ ಹೆಚ್ಚಾಗಿ ಇರುವ ಕಾಳನ್ನು ನೀವು ಕೊಟ್ಟುಬಿಡಬೇಕಾಗಿದ್ದರೂ ನಿಮಗೆ ಸಾಕಷ್ಟು ಕಾಳು ಉಳಿಯುವುದು. ನಿಮ್ಮ ಪಟ್ಟಣದಲ್ಲಿ ಶಿದಾ ಕ್ರಮವನ್ನು ಬಳಿಕೆಯಲ್ಲಿ ತಂದರೆ ನಿಮ್ಮ ದೇಶಬಾಂಧವರಿಗೆ ನೆರವಾಗುವುದಕ್ಕಾಗಿ ಹೀಗೆ ಮಾಡಲಾಗಿದೆಯೆಂದು ನೆನಪಿನಲ್ಲಿಡಿರಿ. ಇಷ್ಟೆಲ್ಲ ಆಗಿಯೂ ನಿಮ್ಮ ಹತ್ತರ ಸಾಕಷ್ಟು ಉಳಿಯುವುದು. ಸ್ವಲ್ಪಾದರೂ ಕೂಡಿಹಾಕಿ ಇಡಬೇಡಿರಿ. ಅಧಿಕಾರಿಗಳೊಡನೆ ಸಹಕರಿಸಿರಿ.

**ಆಹಾರದ ಕೊರತೆಯನ್ನು ಹೋಗಲಾಡಿಸಿರಿ**

ಹಿಷ್ಟುನಸ್ಸಿನಿಂದ ದುಡಿಯಿರಿ ಎಲ್ಲರೂ ಪಾಲುಗಾರರಾಗಿರಿ

## ವ್ಯಾಪಾರಿಗಳಿಗೆ ಮತ್ತು ಬೆಳೆಯುವವರಿಗೆ ಸಂದೇಶ

ನಿಮಗೆ ಶಕ್ಯವಿದ್ದಷ್ಟು ಕಾಳನ್ನೆಲ್ಲ ಹೊರಗೆಡವಿರಿ; ನೀವು ಕೂಡಿಡುವ ಪ್ರತಿಯೊಂದು ಮಣ ಕಾಳು ಒಬ್ಬ ದೇಶಬಾಂಧವನ ಮರಣಕ್ಕೆ ಕಾರಣವಾಗುವುದು. ನಿಯಂತ್ರಿತ ಬೆಲೆಗಳಿಗಷ್ಟೇ ಮಾರಿರಿ-ಅವು ನಿಮಗೆ ಹಾಗೂ ಗ್ರಾಹಕರಿಗೆ ಇಬ್ಬರಿಗೂ ಯೋಗ್ಯವಾಗಿವೆ. ಎರಡನೇಯವರಿಗೆ ದುಃಖ ಕೊಟ್ಟು ಹಣ ಗಳಿಸುವುದು ಪಾಪವೆಂದು ತಿಳಿಯತಕ್ಕದ್ದು.

ಲಾಭಬಡಕರನ್ನು ಮತ್ತು ಕಳ್ಳಪೇಟೆಗಾರರನ್ನು ತಮ್ಮ ಯಾವತ್ತೂ ಶಕ್ತಿಯನ್ನು ಉಪಯೋಗಿಸಿ ಹತ್ತಿಕ್ಕಬೇಕೆಂದು ಸರಕಾರ ಹಾಗೂ ಜನತೆಯು ನಿಶ್ಚಯಿಸಿರುತ್ತದೆ. ಕಳ್ಳಪೇಟೆಯನ್ನು ತಪ್ಪಿಸಿರಿ; ಅದು ಅಪರಾಧವಾಗಿದೆ.

ಹಿಂದುಸ್ಥಾನ ಸರಕಾರದ ಆಹಾರ ಖಾತೆ, ಹೊಸದಿಲ್ಲಿ, ಇವರ ಪ್ರಕಟನೆ

AC—73

# ಮೈಸೂರು ಸರಕಾರಕ್ಕೆ ಕೆ. ಸಿ. ರೆಡ್ಡಿಯವರ ಎಚ್ಚರಿಕೆ

## "ಹೊಣೆಗಾರ ಸರಕಾರ ಬಾರದಿದ್ದರೆ ತಿಕ್ಕಾಟ ನಿಶ್ಚಯ!"

### ವಿಧಾಯಕ ಸಭೆಯಲ್ಲೂ ಸರಕಾರಕ್ಕೆ ಸೋಲುಗಳು

ಮೈಸೂರು ನ್ಯಾಯವಿಧಾಯಕ ಸಭೆಯಲ್ಲಿ ತಾ. ೨೮ ಕ್ಕೆ ಆಯವ್ಯಯ ಪತ್ರಿಕೆಯ ಸಾಮಾನ್ಯ ಚರ್ಚೆ ಮುಗಿಯಿತು. ಕಾಂಗ್ರೆಸ್ ಪಕ್ಷದ ನಾಯಕರಾದ ಶ್ರೀ ಕೆ. ಚಂಗಲರಾಯರೆಡ್ಡಿಯವರು ತಮ್ಮ ಭಾಷಣದಲ್ಲಿ ಸರಕಾರಕ್ಕೆ ಕೆಲ ನೇರವಾದ ಎಚ್ಚರಿಕೆಗಳನ್ನು ಕೊಟ್ಟರು. ಹೊಣೆಗಾರ ಸರಕಾರ ಸ್ಥಾಪಿತವಾದ ಹೊರತು ನಾಡಿನಲ್ಲಿ ಹಿತಕರ ವಾತಾವರಣ ಉಂಟಾಗುವದಿಲ್ಲ. ಸರ್ಕಾರ ಪ್ರಜೆಗಳಲ್ಲಿ ತಿಕ್ಕಾಟ ತಪ್ಪಿದ್ದಲ್ಲ. ಘಟನಾ ಸಮಿತಿಯಲ್ಲಿ ಲೋಕನಿಯುಕ್ತ ಸದಸ್ಯರೇ ಇರಬೇಕೆಂದು ಅವರು ಹೇಳಿದರು. ಸರಕಾರದ ಆಯವ್ಯಯ ಪತ್ರಿಕೆ "ಬಿಬೀರಾಯನ ಕಾಲದ ತತ್ವಗಳಂತೆ" ಸಿದ್ಧವಾಗಿದೆಯೆಂದು ಟೀಕಿಸಿ ಅವರು ಸರಕಾರದ "ರಹಸ್ಯ ಕಾರುಬಾರು"ಗಳನ್ನು ಖಂಡಿಸಿದರು. "ಇಂಥ ರಹಸ್ಯ ಆಡಳಿತ ನಮಗೆ ಬೇಕಿಲ್ಲವೆಂದು ಅವರು ಸ್ಪಷ್ಟವಾಗಿ ಹೇಳಿದರು.

ಪ್ರಜಾಪಕ್ಷದ ಮುಂದಾಳುಗಳಾದ ಶ್ರೀ ಗುರುವಾರೆಡ್ಡಿಯವರೂ ಕಾಂಗ್ರೆಸ್ಸಿನ ಉದಾತ್ತ ಧ್ಯೇಯಗಳೆಲ್ಲ ತಾವೂ ಪಾಲುಗಾರರೆಂದು ಸಾರುತ್ತ, ನ್ಯಾಯ ಮಂತ್ರಿಗಳ ಕೆಲಸದಲ್ಲಿ ಯಾವುದೋ ಹೊರಗಿನ ರಹಸ್ಯ ಕೈವಾಡ ನಡೆಯುತ್ತಿದೆಯೆಂದು ಆರೋಪಿಸಿದರು. ಅಧಿಕಾರವೆಲ್ಲ ಒಬ್ಬನ ಕೈಲಿರುವದರಿಂದ ಮುಖ್ಯ ಮಂತ್ರಿಗಳು ದಕ್ಷರಾಗಿದ್ದರೂ ಸಾಕಷ್ಟು ಕೆಲಸವಾಗುವದಿಲ್ಲೆಂದು ಅವರ ಅಭಿಪ್ರಾಯವಾಗಿತ್ತು.

ಇತರ ಸದಸ್ಯರೂ ಅನೇಕ ಕುಂದುಕೊರತೆಗಳನ್ನು ತೋರಿಸಿ ಮಾತಾಡಿದರು.

ಕಂದಾಯ ಮಂತ್ರಿ ಪುಲ್ಲಾ ರೆಡ್ಡಿಯವರು ತಮ್ಮ ಆಯವ್ಯಯ ಪತ್ರಿಕೆಯನ್ನು ಸಮರ್ಥಿಸಿಕೊಂಡರು. ತುಟ್ಟಿ ಭತ್ತೆ ಹೆಚ್ಚಿಸಿದರೆ ನಿರ್ಮಾಣ ಕಾರ್ಯಕ್ಕೆ ಒಂದು ಕಾಸೂ ಉಳಿಯುವದೇ ಇಲ್ಲೆಂದು ಹಣಕಾಸಿನ ಕಾರ್ಯದರ್ಶಿ ರಾಘವೇಂದ್ರರಾಯರು ಟೀಕೆಯನ್ನು ಬದಿಗೆ ಸರಿಸಿದರು. ಸಂಸ್ಥಾನದಿಂದ ಸಲ್ಲುತ್ತಿರುವ ಕಪ್ಪನ್ನು ತೆಗೆದು ಹಾಕಲು ಮತ್ತು ದಂಡಿನ ಪ್ರದೇಶವನ್ನು ತಿರುಗಿ ಕೊಡಲು ವಿಚಾರ ನಡೆದಿದೆಯೆಂದು ಹೇಳಲಾಯಿತು.

### ಪುನಃ ದಿವಾಣರ ಹಸ್ತಕ್ಷೇಪ

ತಾ. ೨೮ ಕ್ಕೆ ನಿಲುವಳಿ ಸೂಚನೆಯ ವಿಷಯದಲ್ಲಿ ಪುನಃ ದಿವಾಣರು ಹಸ್ತಕ್ಷೇಪ ಮಾಡಿದ್ದರಿಂದ ಸ್ವಲ್ಪ ಕಹಿ ಚರ್ಚೆಯಾಯಿತು. ಕಾಂಗ್ರೆಸ್ ಮುಂದಾಳಾದ ಶ್ರೀ ಎನ್. ಪಿ. ತಿಮ್ಮಾರೆಡ್ಡಿಯವರಿಗೆ ಚಿಕ್ಕಬಳ್ಳಾಪುರ ಸ್ಪೆಶಲ್ ಫರ್ಸ್ಟ್‌ಕ್ಲಾಸ ಮ್ಯಾಜಿಸ್ಟ್ರೇಟರು ವಿಧಿಸಿದ ಶಿಕ್ಷೆ ಮತ್ತು ಆ ಪ್ರಕರಣ ಸಂಬಂಧವಾಗಿ ಹಾಜರುಪಡಿಸಲಾದ ಮೈಸೂರು ರೆಸಿಡೆಂಟರ ಪತ್ರವನ್ನು ಕುರಿತು ಶ್ರೀ ಚಂಗಲರಾಯರೆಡ್ಡಿಯವರು ತಂದಿದ್ದ ನಿಲುವಳಿ ಸೂಚನೆಯನ್ನು ದಿವಾಣರು ತಳ್ಳಿಹಾಕಿದ್ದಾರೆಂದು ಅಧ್ಯಕ್ಷ ಗುಂಡಪ್ಪಗೌಡರು ತಿಳಿಸಿದರು. ಸಭೆಯ ಮುಂದೆ ಈ ನಿಲುವಳಿ ಬರುವ ಮೊದಲೇ ಅದು ದಿವಾಣರ ಬಳಿ ಹೇಗೆ ಹೋಯಿತೆಂಬ ಪ್ರಶ್ನೆ ಉದ್ಭವಿಸಿದಾಗ ಪದ್ಧತಿಯಂತೆ ನಿಲುವಳಿಯನ್ನು ಸಭಾನಾಯಕರಿಗೆ ತಿಳಿಸಿದ್ದು ಅದು ಅವರ ಮೂಲಕ ದಿವಾಣರಿಗೆ ಮುಟ್ಟಿರಬಹುದೆಂದು ಹೊರಗೆ ಬಂತು. ಇದು ದಿವಾಣರ "ಸ್ವಚ್ಛಂದ" ವರ್ತನೆಯೆಂದು ಶ್ರೀ ಕೆ. ಸಿ. ರೆಡ್ಡಿಯವರೂ ಪ್ರಜಾ ಪಕ್ಷದ ಗುರುವಾ ರೆಡ್ಡಿಯವರೂ ಪ್ರತಿಭಟಿಸಿದರು. ಪ್ರತಿಭಟನೆಯನ್ನು ಮಿನಿಟ ಪುಸ್ತಕದಲ್ಲಿ ಬರೆಯಲಾಯಿತು.

### ಸೋಲುಗಳ ಸಾಲು

ತಾ. ೨೫ ಕ್ಕೆ ಆಯವ್ಯಯ ಬೇಡಿಕೆಗಳ ಮೇಲೆ ಮತದಾನ ಪ್ರಾರಂಭವಾದೊಡನೆ ನಾಮುಕರಣ ಸದಸ್ಯರಿಂದ ತುಂಬಿರುವ ವಿಧಾಯಕ ಸಭೆಯಲ್ಲಿ ಕೂಡ ಸರಕಾರದ ನೀತಿಗೆ ಎಷ್ಟು ಬೆಂಬಲವಿದೆಯೆಂಬುದು ಹೊರಬೀಳತೊಡಗಿತು. ಮೊದಲನೆ ದಿನವೇ ಭೂಕಂದಾಯ ಮತ್ತು ಅಬಕಾರಿ ಬೇಡಿಕೆಗಳ ಮೇಲೆ ಮಂಡಿಸಲ್ಪಟ್ಟ ಎರಡು ಕಡಿತದ ಸೂಚನೆಗಳು ಸ್ವೀಕೃತವಾಗಿ ಸರಕಾರಕ್ಕೆ ಸೋಲೊದಗಿತು. ಛಿನ್ನವಿಚ್ಛಿನ್ನವಾಗಿರುವ ಹಿಡುವಳಿಗಳನ್ನು ಒಟ್ಟುಗೂಡಿಸಬೇಕೆಂದು ಸೂಚಿಸಿ ಶ್ರೀ ಮಾದಯ್ಯನವರು ಪಂಜಾಬ ಬಡೋದೆಗಳಲ್ಲಿ ಮಾಡಿದ ಪ್ರಯೋಗಗಳನ್ನು ತೋರಿಸಿದರು. ಕಂದಾಯ ಮಂತ್ರಿ ಪುಲ್ಲಾ ರೆಡ್ಡಿಯವರು ಸಹಾನುಭೂತಿ ವ್ಯಕ್ತಗೊಳಿಸಿದರೂ ಸೂಚನೆಯನ್ನು ವಿರೋಧಿಸಿದರು. ಆದರೆ ಕಾಂಗ್ರೆಸ್-ಪ್ರಜಾ ಪಕ್ಷಗಳಲ್ಲದೆ ಕೆಲ ಸ್ವತಂತ್ರ ಹಾಗೂ ನಾಮುಕರಣ ಸದಸ್ಯರೂ ಕಡಿತಕ್ಕೆ ಮತವಿತ್ತುದರಿಂದ ಅದು ಅಂಗೀಕೃತವಾಯಿತು. ಇನ್ನೊಂದು ಕಡಿತ ಪಾನನಿರೋಧವನ್ನು ಒಡನೆ ಜಾರಿಯಲ್ಲಿ ತರಬೇಕೆಂದು ಶ್ರೀ ಮಾದಯ್ಯನವರು ಮಂಡಿಸಿದ್ದು. ಅದಕ್ಕೂ ಸಾರ್ವತ್ರಿಕ ಬೆಂಬಲ ದೊರೆಯಿತು. ಸರಕಾರ ಅಡಚಣೆಗಳ ನೆವ ಹೇಳಿತು. ಕಡಿತ ಪಾಸಾಯಿತು. ನಾಮುಕರಣ ಸದಸ್ಯರ ಬೆಂಬಲವಲ್ಲದಿದ್ದರೆ ಇಡಿ ಅಬಕಾರಿ ಬೇಡಿಕೆಯೇ ನಿರಾಕರಿಸಲ್ಪಡುವ ಸಂಭವವಿತ್ತು.

ತಾ. ೨೮ಕ್ಕೆ ಮುಜರಾಯಿ ಬೇಡಿಕೆ ಬಂದಾಗ ದೇವಸ್ಥಾನಗಳಲ್ಲಿ ಹರಿಜನರಿಗೆ ಪ್ರವೇಶವೀಯಬೇಕೆಂಬ ಇನ್ನೊಂದು ಕಡಿತ ಪಾಸಾಯಿತು. ಸರಕಾರಿ ಇಲಾಖೆಯಲ್ಲಿ ದಕ್ಷತೆ, ಶಿಸ್ತುಗಳ ಅಭಾವವನ್ನು ಖಂಡಿಸಿ ಶ್ರೀ ಕಡಿದಾಳ ಮಂಜಪ್ಪನವರು ಮಂಡಿಸಿದ ಕಡಿತ ಬರಿ ೨ ಮತಗಳು ಕಡಿಮೆಬಿದ್ದು ಸೋತುಹೋಯಿತು. ಆರೋಗ್ಯ ಖಾತೆಯ ಬೇಡಿಕೆಗೆ ಕಡಿತ ಮಂಡಿಸಲ್ಪಟ್ಟಾಗ ಸ್ತ್ರೀ ಸದಸ್ಯರಾದ ಶ್ರೀಮತಿ ಕಮಲಾದೇವಿಯವರು ಮಹಿಳಾ ಆರೋಗ್ಯ ಮಂತ್ರಿಗಳನ್ನು ನೇಮಿಸಬೇಕೆಂದು ವಾದಿಸಿದರು. ತಾ. ೨೯ ಕ್ಕೆ ವಿಶ್ವವಿದ್ಯಾಲಯ ಬೇಡಿಕೆ ಬಂದಾಗ ಸಿನೇಟ ಮತ್ತು ಕೌನ್ಸಿಲ ಸಭೆಗಳಿಗೆ ಹೆಚ್ಚಿನ ಅಧಿಕಾರ ಮತ್ತು ವಿಶ್ವವಿದ್ಯಾಲಯಕ್ಕೆ ಹೆಚ್ಚಿನ ಸ್ವಾತಂತ್ರ್ಯವೀಯಬೇಕೆಂದು ಶ್ರೀ ಎಲ್. ಎಸ್. ವೆಂಕಾಜಿರಾಯರು ತಂದ ಕಡಿತವೂ ಪಾಸಾಗಿ ಸರಕಾರಕ್ಕೆ ನಾಲ್ಕನೆ ಸೋಲುಂಟಾಯಿತು. ತಾ. ೧ಕ್ಕೆ ಲಂಡನ್ನಿನಲ್ಲಿ ಮೈಸೂರಿನ ಟ್ರೇಡ ಕಮಿಶನರರಾಗಿ ಮೈಸೂರವರನ್ನೇ ನೇಮಿಸಬೇಕೆಂದು ಶ್ರೀ ಮರಿಯಪ್ಪನವರು (ಕಾಂ.) ತಂದ ಕಡಿತ ಸೂಚನೆ ಕೂಡ ೪೨-೨೨ ಮತಗಳಿಂದ ಪಾಸಾಗಿ ಸರಕಾರ ಮತ್ತೊಂದು ಸೋಲು ತಿಂದಿತು.

ಸಭೆ ಇನ್ನೂ ಸಾಗಿದೆ.

## ದಕ್ಷಿಣ ಕನ್ನಡ

ದಕ್ಷಿಣ ಕನ್ನಡ ಜಿಲ್ಲೆಗೆ ಪಂಜಾಬದಿಂದ ೯ ಸಾವಿರ ಚೀಲ ಅಕ್ಕಿ ಬರಲಿದೆಂದೂ ಅದು ಕಾಸರಗೋಡು ಭಾಗದಲ್ಲಿ ಹಂಚಲ್ಪಡಬಹುದೆಂದೂ ತಿಳಿಯುತ್ತದೆ

ಜಿಲ್ಲಾ ಕಲೆಕ್ಟರ ಶ್ರೀ ಭೂತಲಿಂಗಂ ಅವರ ಅಧ್ಯಕ್ಷತೆಯಲ್ಲಿ ಕೂಡಿದ ಜಿಲ್ಲಾ ಆಹಾರ ಸಮಿತಿಯ ಸಭೆಯಲ್ಲಿ ಜೂನ ೮ ರ ವರೆಗೆ ದಕ್ಷಿಣ ಕನ್ನಡದಲ್ಲಿ ಸಂಗ್ರಹವಿದ್ದ ಅಕ್ಕಿ ೧೭೧೭೩ ಟನ್ ಎಂದೂ ಮುಂದಿನ ಬೆಳೆ ವರೆಗೆ ೧೦೦೦೦ ಟನ್ ಕೊರತೆ ಬೀಳಬಹುದೆಂದೂ ಮಲಬಾರಕ್ಕೆ ಸಾಲ ಕೊಟ್ಟ ಅಕ್ಕಿ ಬೇಗನೆ ತಿರುಗಿ ಬರದಿದ್ದರೆ ಇಲ್ಲಿಯ ಅಕ್ಕಿ ಪರಿಸ್ಥಿತಿ ಹದಗೆಡಬಹುದೆಂದೂ ಸೂಚಿಸಲಾಯಿತು. ಬಾವಿ ತೋಡಿಸುವ ಮತ್ತು ಕೆರೆಗಳನ್ನು ದುರಸ್ತಿ ಮಾಡುವ ಕೆಲಸ ಭರದಿಂದ ಕೈಕೊಳ್ಳಲ್ಪಡುವದೆಂದು ಕಲೆಕ್ಟರರು ತಿಳಿಸಿದರು.

ತಾ. ೨೬ ಕ್ಕೆ ಜರಗಿದ ಪತ್ರಿಕಾ ಪ್ರತಿನಿಧಿ ಸಭೆಯಲ್ಲಿ ಜಿಲ್ಲಾ ಕಲೆಕ್ಟರರು ಹೊಸದಾಗಿ ಸ್ಥಾಪಿಸಲ್ಪಡುವ ಗ್ರಾಮ ಸಮಿತಿಗಳ ವಿವರಣೆ ಕೊಟ್ಟರು ಹಳ್ಳಿಯಲ್ಲಿ ಬೆಳೆದ ಅಕ್ಕಿಯಲ್ಲಿ ಅದಕ್ಕೆ ಬೇಕಾದಷ್ಟನ್ನು ಅಲ್ಲೇ ಉಳಿಸಿ ಉಳಿತಾಯವನ್ನು ಮಾತ್ರ ಹೊರಗೊಯ್ಯುವಂತೆ ಮಾಡಿ ಈಗಿನ ಆಹಾರ ಹಂಚುವಳಿಯ ದೋಷಗಳನ್ನು ನಿವಾರಿಸುವದೇ ಈ ಸಮಿತಿಗಳ ಉದ್ದೇಶ. ಅಕ್ಕಿ, ಅರಿವೆ, ಸೀಮೆಎಣ್ಣೆ, ಸಕ್ಕರೆ ಹಾಗು ವ್ಯವಸಾಯ ಸಾಮಗ್ರಿಗಳನ್ನು ಹಂಚುವ ಹೊಣೆ ಸಮಿತಿಗಳಿಗೆ ಕೊಡಲಾಗುವದಲ್ಲದೆ ಆ ಹಳ್ಳಿಯ ಹುಟ್ಟುವಳಿಯನ್ನು ಕುರಿತು ಗ್ರಾಮ ಶಾನುಭೋಗರು ತಯಾರಿಸುವ ಅಂದಾಜನ್ನು ತಿದ್ದುಪಡಿ ಮಾಡುವ ಅವಕಾಶ ಅವಕ್ಕಿದೆ. ಜುಲೈ ಮಧ್ಯದೊಳಗೆ ಈ ಸಮಿತಿಗಳೂ ಅಸ್ತಿತ್ವದಲ್ಲಿ ಬರುವವು.

ಅಕ್ಕಿ ಭತ್ತಗಳನ್ನು ಸರಕಾರದವರು ರಿಕ್ವಿಜಿಶನ್ ಮಾಡಿದ ಪ್ರಮಾಣದಲ್ಲಿ ಸಲ್ಲಿಸದಿದ್ದುದಕ್ಕೆ ಪುತ್ತೂರಿನಲ್ಲಿ ಹಲವು ರೈತರ ಮೇಲೆ ದಂಡ ಹೊರಿಸಲಾಗಿತ್ತು. ಆದರೆ ಈಗ ಕಲೆಕ್ಟರರಲ್ಲಿ ರೈತರು ಮಾಡಿದ ಮನವಿಯನ್ನು ಲಕ್ಷಿಸಿ ಉಳಿದ ಎಲ್ಲ ಪ್ರಕರಣಗಳನ್ನು ಹಿಂತೆಗೆದುಕೊಳ್ಳಲಾಗಿದೆಯೆಂದು ತಿಳಿಯುತ್ತದೆ.

ಮಂಗಳೂರಿನಲ್ಲಿ ತಾ ೨೫ ಕ್ಕೆ ಜರಗಿದ ಜಿಲ್ಲಾ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಮದ್ರಾಸ ಸರಕಾರದವರು ತೋರಿಸಿದ ಕನ್ನಡ ವಿರೋಧಿ ಧೋರಣೆಯನ್ನು ಟೀಕಿಸುವ ಎರಡು ಗೊತ್ತುವಳಿಗಳು ಸ್ವೀಕೃತವಾದವು. ಮದ್ರಾಸ ಶಾಸನ ಸಭೆಯ ಕಾಂಗ್ರೆಸ್ ಪಕ್ಷದ ಕಾರ್ಯಕಾರಿ ಮಂಡಲದ ಆಯ್ಕೆಯಲ್ಲಿ ಕನ್ನಡಿಗರೊಬ್ಬರಿಗೂ ಸ್ಥಾನವಿಲ್ಲದುದಕ್ಕೆ ಒಂದು ಗೊತ್ತುವಳಿ ಸಂಬಂಧಿಸಿದೆ. ಅದು ಶ್ರೀ ಕಾರಂತರು ಕಾರ್ಯಕಾರಿ ಆಯ್ಕೆಯಲ್ಲಿ ಸೋತುದನ್ನು ಉಲ್ಲೇಖಿಸಿ ಅವರಲ್ಲದಿದ್ದರೆ ಇನ್ನಾವ ಕನ್ನಡಿಗನನ್ನಾದರೂ ಕಾರ್ಯಕಾರಿ ಸಮಿತಿಗೆ ಆರಿಸಬೇಕೆಂದು ಒತ್ತಾಯಗೊಳಿಸಿದೆ. ಇನ್ನೊಂದು ಗೊತ್ತುವಳಿಯಲ್ಲಿ ಇಂಜನಿಯರಿಂಗ, ಮೆಡಿಕಲ್ ಕಾಲೇಜುಗಳಲ್ಲಿ ಪ್ರವೇಶ ಕೊಡುವಾಗ ಆಂಧ್ರ, ತಮಿಳರಿಗೆ ಹೆಚ್ಚು ಪ್ರಮಾಣದಲ್ಲಿ ಪ್ರವೇಶಕ್ಕೆ ಅವಕಾಶ ಮಾಡಿದ್ದನ್ನೂ ಸರಕಾರದವರು ಕೈಕೊಂಡು ಖಾದಿ ಕಾರ್ಯಕ್ರಮದಲ್ಲಿ ಕರ್ನಾಟಕ ಚರಕ ಸಂಘಕ್ಕೆ ಸ್ಥಾನ ಕೊಡಲು ನಿರಾಕರಿಸಿದ್ದನ್ನೂ ಮತ್ತು ಮೂಲ ಶಿಕ್ಷಣ ಕೇಂದ್ರಗಳನ್ನು ಮಾಡುವಾಗ ಕರ್ನಾಟಕವನ್ನು ಬಿಟ್ಟೇ ಬೇರೆ ಭಾಷಾ ಪ್ರಾಂತಗಳಲ್ಲಿ ತೆರೆಯುವ ಯೋಜನೆ ಮಾಡಿದ್ದನ್ನೂ ಕುರಿತು ಗಂಭೀರ ವಿವಂಚನೆಯನ್ನು ತೋರಿಸಲಾಗಿದೆ. ಈ ಅನ್ಯಾಯವನ್ನು ಒಡನೆ ಪರಿಹಾರ್ಜನೆ ಮಾಡಬೇಕೆಂದು ಮದ್ರಾಸ ಶಾಸನ ಸಭಾ ಸದಸ್ಯರನ್ನು ಕೇಳಿಕೊಳ್ಳಲಾಗಿದೆ.

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರ ಪೇಟೆ

ತಾ. ೩

ಮುಂಬಯಿ ಶೇರ ಪೇಟೆಯಲ್ಲಿ ಅಸ್ಥಿರತೆ ಕಾಲೂರಿದೆ. ಬೆಲೆಗಳ ಒಲವು ಇಳಿತದ ಕಡೆಗಿದ್ದರೂ ಟಾಟಾ ಸ್ಟೀಲ ಪಾಲುಗಳ ಲಾಭಾಂಶ ಸಾರಲ್ಪಡುವ ವರೆಗೆ ಅವು ಅಷ್ಟೊಂದು ಪರಿಣಾಮಗೊಳ್ಳುವಂತಿಲ್ಲ. ಜವಳಿ ಪಾಲುಗಳಲ್ಲಿ ಉತ್ಪಾದನ ವೆಚ್ಚದ ಹೆಚ್ಚಳದ ಭೀತಿಯಿಂದ ಬೆಲೆಗಳು ಇಳಿದಿವೆಯಾದರೂ ಬಾಂಬೇ ಡಾಯಿಂಗ ಮಾತ್ರ ಇದಕ್ಕೆ ಸ್ವಲ್ಪ ಅಪವಾದರೂಪವಾಗಿದೆಯೆನ್ನಬಹುದು. ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೩೨೨೦—೦—೮ ರ ವರೆಗೆ ಹೋಗಿದ್ದವುಗಳು ೩೧೯೬—೪—೦ ವರೆಗೂ ಇಳಿದು ಬಿಟ್ಟರೂ ಮತ್ತೆ ಸುಧಾರಿಸಿ ೩೨೧೫-೦-೦ ಕ್ಕೇರಿದವು. ಡಾಯಿಂಗ ೨೬೨೨-೦-೦ ರ ವರೆಗೇರಿ ೨೬೨೦-೦-೦ ಕ್ಕಿಳಿದರೂ ಕಳೆದ ವಾರಕ್ಕಿಂತ ಮೇಲ್ಮಟ್ಟದಲ್ಲೇ ಇದೆ. ಇತರ ಜವಳಿ ಪಾಲುಗಳಲ್ಲಿ ಕೋಹಿನೂರು ೯೪೯-೦-೦ ರಿಂದ ೯೩೯-೦-೦ ಕ್ಕೆ ಸ್ವದೇಶಿ ೮೪೯—೦—೦ ರಿಂದ ೮೩೪—೦—೦ ಕ್ಕೆ ಗೋಕಾಕ ೩೯೪—೦—೦ ,, ೩೯೦—೦—೦ ಕ್ಕೆ ಇಳಿದರೆ ಸೆಂಚೂರಿ ೧೧೦೦-೦-೦ ರಿಂದ ೧೧೦೫-೦-೦ ಕ್ಕೇರಿತು. ಬೇಲಾಪುರ ೩೩೯—೦—೦ ರಿಂದ ೩೩೨—೦—೦ ಕ್ಕಿಳಿಯಿತು. ಅಸೋಸಿಯೇಟೆಡ ಸಿಮೆಂಟ್ಸ ೨೬೧-೮-೦ ರಲ್ಲಿ ಹೆಚ್ಚು ಕಡಿಮೆ ನಿಶ್ಚಲವಾಗಿದೆ.

ಬ್ಯಾಂಕುಗಳಲ್ಲಿ ಶೆಂಟ್ರಲ್ ೧೪೩-೮-೦ ಯಿಂದ ೧೪೪-೦-೦ ಕ್ಕೇರಿದರೆ ಇಂಪೀರಿಯಲ್ ಎಫ್ ಸಿ ೩೧೭೫-೦-೦ ಗೇರಿದ್ದುದು ೩೧೫೦-೦-೦ ಕ್ಕಿಳಿದರೂ ಕಳೆದ ವರದಿ ಕಾಲಕ್ಕಿಂತ ಮೇಲ್ಮಟ್ಟದಲ್ಲೆ ಇದೆ. ರಿಝರ್ವ ೧೭೫—೧೭೬ ರ ಸುತ್ತ ಇದೆ.

ಸರಕಾರಿ ಸಾಲಪತ್ರಗಳಲ್ಲಿ ಜಿ. ಪಿ. ನೋಟು ಇನ್ನೂ ತುಸು ಏರಿ ೧೦೫-೩-೦ ಕ್ಕೆ ಬಂದಿದೆ. ೩॥ (೧೯೪೭—೫೦) ಪತ್ರ ೧೦೨-೧೧-೦:

### ಚಿನ್ನ-ಬೆಳ್ಳಿ

ಚಿನಿವಾರ ಕಟ್ಟೆಯಲ್ಲಿ ಬೆಲೆಗಳು ಕಳೆದ ವಾರದಿಂದ ಹಿಂದೇಟು ಇನ್ನೂ ಮುಂದೆ ಸಾಗಿದೆ. ಚಿನ್ನ ೧೦೨-೧೧-೦ ರ ವರೆಗೂ ಇಳಿದು ೧೦೩-೪-೦ ಕ್ಕೇರಿದೆ. ಬೆಳ್ಳಿಯಾದರೂ ೧೭೨-೦-೦ ರಿಂದ ೧೬೭-೦-೦ ಕ್ಕಿಳಿದರೂ ಮುಂದೆ ೧೬೮-೦-೦ ಕ್ಕೆ ಸುಧಾರಿಸಿತು. ಒಟ್ಟಿನ ಮೇಲೆ ಬೆಲೆಗಳು ಇಳಿಯುವ ಒಲವೇ ಕಾಣಬರುತ್ತಿದೆ. ಸಾವರಿನ ರೂ. ೬೮-೦-೦.

### ಅರಳೆ

ಅಮೇರಿಕೆಯ ಅರಳೆಯಲ್ಲಿ ತೀವ್ರ ಏರಿಕೆಗಳು ಕಂಡುಬರುತಿವೆ. ಈ ವರ್ಷ ಆಹಾರ ಬೆಳೆಯ ಮೇಲೆಯೆ ವಿಶೇಷ ಲಕ್ಷ್ಯವಿರುವದರಿಂದ ಮುಂದೆ ಹತ್ತಿಯ ಬರ ಬರಬಹುದು. ಅದ್ದರಿಂದ ಹತ್ತಿಯ ಬೆಲೆಯಲ್ಲಿ ಮಹತ್ವದ ಇಳಿತಾಯವನ್ನು ನಿರೀಕ್ಷಿಸುವದು ವ್ಯರ್ಥ ಈ ವಾರ ಬೆಲೆಗಳು ಕೆಲ ರೂಪಾಯಿಗಳ ಏರಿಳಿತ ತೋರಿದರೂ ಒಟ್ಟಿನ ಮೇಲೆ ಕಳೆದ ವರದಿ ಕಾಲಕ್ಕಿಂತ ಏರಿಕೆಯಲ್ಲಿಯೇ ನಿಂತಿತು. ಜುಲೈ ವಾಯಿದೆ ೪೫೫-೦-೦ ರಿಂದ ೪೬೫-೦-೦ ರ ವರೆಗೆ ಹೋದರೂ ಮುಂದೆ ತುಸು ಇಳಿದು ೪೫೮-೮-೦ ಕ್ಕಿಳಿಯಿತು. ಆದರೆ ಸೆಪ್ಟೆಂಬರ ವಾಯಿದೆಯಲ್ಲಿ ಈ ಅಗಲವಾದ ಚಿಚ್ಚು ಕಡಿಮೆ ಕಾಣಲಿಲ್ಲ. ಅದು ೪೬೭-೮-೦ ರಿಂದ ೪೭೪-೪-೦ ಕ್ಕೇರಿ ೪೭೦-೮-೦ ಕ್ಕಿಳಿಯಿತು.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೨೫—೪—೦ |
| ಅಗಸಿ | ೨೫—೮—೦ |
| ಅಗಸಿ ಎಣ್ಣೆ | ೧೮—೦—೦ |

### ಶಿವಮೊಗ್ಗೆ

| | | | | | |
|---|---|---|---|---|---|
| ದೇಶಾವರ ನಂ. ೧ | ಮಣ ೧ ಕ್ಕೆ | ೨೩ | ರಿಂದ | ೨೬ |
| ,, ,, ೨ | | ೨೨ | ,, | ೨೫ |
| ,, ,, ೩ | ,, | ೨೨ | ,, | ೨೪ |
| ರಾಜಾ ಅಲವು | ,, | ೨೮ | ,, | ೨೫ |
| ಚಿಟ್ಟ | ,, | ೧೪ | ,, | ೧೬॥ |
| ವಂತಿ | ,, | ೧೬ | ,, | ೧೭ |

ಚಿಟ್ಟಿಗೆ ವಿಶೇಷ ಬೇಡಿಕೆ ಇದೆ.

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ ರೂ. | | ೧೪—೧೬ |
| ಮೆಣಸಿನಕಾಯಿ ಹೇರು | ,, | ೧೮೦—೨೦೦ |
| ಶೇಂಗಾ | ,, | ೧೦೭ |
| ದೇಶಿ ತಂಬಾಕು ಹೇರು | | ೧೦೦-೨೦೦ |
| ತಂಬಾಕ ಪಂಢರಪುರಿ | ” | ೧೫೦—೨೫೦ |
| ತಂಬಾಕು ಅಕೋಳ (ಹೇರು) | | ೨೨೫—೩೭೫ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೩೦೧ |
| ,, | ನಂ. ೨ | ೨೯೦ |
| ,, | ನಂ. ೩ | ೨೮೦-೨೮೫ |
| ಜಿನ | | ೨೧೫-೨೨೫ |
| ಸಾಜಿನ | | ೨೧೦-೨೧೨ |
| ಡಬಳರೋಲರ | | ೨೦೫-೨೨೦ |





# ವೈಶಾಖ ಮಾಸದ ಕತೆಗಳು

(ಕಲಾ ಮಂಟಪ ಬೆಳಗಾವಿ)

( ಕನ್ನಡ ಪತ್ರಿಕೆಗಳಲ್ಲಿ ಬಂದ ಮಾಸಿಕ ಸಿಂಹಾವಲೋಕನ ಮಾಡಿ "ಕಲಾ ಮಂಟಪ" ದವರು ಬರೆಯುತ್ತಿರುವ ಲೇಖಗಳಲ್ಲಿ ಇದು ಎರಡನೆಯದು. ಇದರಲ್ಲಿ ಎಲ್ಲ ಕತೆಗಳು ವಿವೇಚಿಸಲ್ಪಟ್ಟಿವೆಯೆಂದು ಹೇಳುವ ಸಾಹಸ ನಮ್ಮದಲ್ಲ. ಕಣ್ಣು ತಪ್ಪಿ ಉಳಿಯುವ ಕತೆಗಳು ಕೆಲ ವಿರಬಹುದು. "ಮಂಟಪ" ದವರು ನಡೆಸಿರುವ ಈ ಹೊಸ ಉಪಕ್ರಮ ಬೇಗನೆ ಜನಪ್ರಿಯವಾದೀತೆಂದು ಭಾವಿಸುತ್ತೇವೆ. ಇದರಲ್ಲಿ ಬಂದ ಅಭಿಪ್ರಾಯಗಳು ಸಂಪಾದಕರವಲ್ಲವೆಂದು ವಾಚಕರೂ ಲೇಖಕರೂ ಗಮನಿಸಬೇಕು. —ಸಂ )

* * *

ಬೇಸಿಗೆಯಲ್ಲಿ ನಮ್ಮ ಕನ್ನಡ ಪತ್ರ-ಪ್ರಪಂಚದಲ್ಲಿ ಸುಮಾರು ೪೧ ಕತೆಗಳು ಬಂದಿವೆ. ಇವುಗಳಲ್ಲಿ ಏಳು ಕತೆಗಳು ಅನುವಾದ. ಉಳಿದವೆಲ್ಲ ಸ್ವತಂತ್ರ ಕತೆಗಳು.

## ಅನುವಾದದ ಕತೆಗಳು

ಮತ್ಸರೀಪ್ರೇಮದ ಮಡುವಿನಲ್ಲಿ ಸಿಕ್ಕ ಇಂದಿರೆ ನಾಗರಾಜರ ರಸಮಯ ಮಿಲನವು ಚಮತ್ಕಾರವಾಗಿ "ಹಿರಿಯಮಗಳ ಮದುವೆ" ಯಲ್ಲಿ ಹೆಣೆಯಲಾಗಿದೆ. ಚೋರವೃತ್ತಿಯಿಂದ ಶಿಕ್ಷೆಯನ್ನು ಅನುಭವಿಸಿದರೂ ಅವರು ಚೋರವೃತ್ತಿಯನ್ನು ಬಿಡರು ತಿರುಗಿ ಅವರ ವಂಶಜರು ಸಹ ಭಯಂಕರ ಚೋರರಾಗುವರು. ಇದಕ್ಕೆ "ಯಾರು ಹೊಣೆ" ಎಂಬ ಕತೆಯು ಮಾರ್ಮಿಕವಾಗಿ ಬರೆಯಲಾಗಿದೆ. ಅಸ್ಪೃಶ್ಯರು ಸ್ಪೃಶ್ಯಹಿಂದುಗಳಿಗೆ ಯಾವ ರೀತಿಯಲ್ಲಿಯೂ ಕಡಿಮೆ ಇಲ್ಲ ಎಂಬ ಮಹಾತ್ಮರ ಪ್ರಾಣದುಸಿರನ್ನು "ಗಾಂಧಿಜಿಕಿ ಜೈ" ಎಂಬ ಕತೆಯಲ್ಲಿ ಕಾಣಬಹುದು. ಹೀಗೆಯೇ "ಮೂರು ಗುಂಡಾಗಳು" "ಒಂದು ಹಳೆಯ ನೆನಪು" "ಪ್ರೇಮದ ಪುನರಾಗಮನ" ಗಳು ಜೀವನದಲ್ಲಿಯ ಒಂದೊಂದು ಸೂಕ್ಷ್ಮ ಸಂಗತಿಯನ್ನು ಬಳಸಿಕೊಂಡು. ತಮ್ಮದೇ ಒಂದು ರಂಗಸ್ಥಳವನ್ನು ನಿರ್ಮಿಸಿಕೊಂಡು ದಿವ್ಯವಾಗಿ, ಭವ್ಯವಾಗಿ ಮಿರುಗುವವು. "ವಾಮಹಸ್ತೋದ್ಧಾರಕ ಸಂಘ" ವು ಒಂದು ಉತ್ಕೃಷ್ಟವಾದ ರೂಪಕವು. ಈ ಅನುವಾದ ಕತೆಗಳನ್ನು ನಮ್ಮ ಉಳಿದ ಕನ್ನಡ ಕತೆಗಳಲ್ಲಿ ಬೆರಸಿದರೆ ಅವು ಹೆಚ್ಚು ಹೊಳಪುಳ್ಳವುಗಳಾಗಿ ಕಂಡು ಬರುವವು. ನಮ್ಮ ಕತೆಗಾರರು ಈ ಮಾತನ್ನು ವಿಚಾರಿಸಬೇಕು.

## ಪ್ರೇಮ—ಕಾಮ

ಪ್ರೇಮ-ಕಾಮಗಳು ಜೀವನದಲ್ಲಿ ಗಂಗೆಯಮುನೆಯರಂತೆ ರಮ್ಯವಾದವುಗಳು. ಸಾಹಿತ್ಯವು ಈ ಪರಿಸೀಮೆಯನ್ನು ದಾಟಿದಂತಿಲ್ಲ—ಮುಂದೂ ದಾಟುವಂತಿಲ್ಲ. ಈ ಭವ್ಯ ಜೀವನವು ಬೆಳೆದುಕೊಂಡು ಮುಂದೋಡಲು ಅವು ಸಹಕಾರಿಯಾಗಿ ನಿಲ್ಲಬೇಕು ಜೀವಿಗಳು ಅವುಗಳ ತೆಕ್ಕೆ-ಮುಕ್ಕೆಯಲ್ಲಿ ಹಿಗ್ಗಬೇಕು.

ಈ ಸಾರೆಯ ಕತೆಗಳಲ್ಲಿ ಸುಮಾರು ಹತ್ತು ಕತೆಗಳು ಈ ಸೂತ್ರವನ್ನು ಸ್ಪಷ್ಟೀಕರಿಸುವವು "ಉಮಾ" ಮತ್ತು "ಸುಶೀಲೆಯ ನೆನಪಿಗಾಗಿ" ಕತೆಗಳಲ್ಲಿ ಅಶೋಕ ಮತ್ತು ರಮೆಯ ಗಂಡ ಆರಂಭದಲ್ಲಿ ಪ್ರೇಮಜೀವಿಗಳು. ಅಶೋಕ ಮೆಚ್ಚಿ ಉಮೆಯನ್ನು ಮದುವೆಯಾಗುವನು. ಆದರೆ ಅವನ ಕಾಮು—ಜೀವನಕ್ಕೆ ರಜನಿಯು ನೆರವಾಗುವಳು. ರಂಜನಿಯ ಪೂರ್ವ-ಸ್ನೇಹಿತನು ಅಶೋಕನ ಮುಖಕ್ಕೆ ಆಸಿಡ್ ಎರಚುವನು. ಅಶೋಕ ಈಗ ವಿರೂಪಿ ರಜನಿಯಿಂದ ಪರಿತ್ಯಕ್ತ. ಕೊನೆಗೆ ಶಿವಮಂದಿರದಲ್ಲಿ ಆತ್ಮಹತ್ಯೆ. ರಮೆಯಗಂಡ ಸುಶೀಲೆಯನ್ನು ತೊರೆದು ರಮೆಯನ್ನು ಮದುವೆಯಾಗುವನು. ಆದರೆ ಆ ಪ್ರೇಮಮುಗ್ಧೆಯಾದ ಸುಶೀಲೆಯು ಅಣ್ಣನ ಬಲುಮೆಗೆ ಒಳಗಾಗದೆ ಬಾವಿಯಲ್ಲಿ ಬಿದ್ದು ಸಾಯುವಳು. ಇದು ರಮೆಯ ಗಂಡನಿಗೆ ತಿಳಿದು ಪೂರ್ವಸ್ಮೃತಿಯ ಪ್ರಾಯಶ್ಚಿತ್ತವೆಂದು ಮಗಳಿಗೆ ಸುಶೀಲೆಯೆಂದು ಹೆಸರಿಡುವನು. ಈ ಎರಡೂ ಕತೆಗಳಲ್ಲಿ ಪುರುಷನ ಸ್ವಚ್ಛಂದ ಕಾಮಜೀವನವನ್ನು ಕಾಣಬಹುದು. ಹೆಂಡತಿಯನ್ನು ಕಾಣಬೇಕೆಂದು ಹಂಬಲಿಸುವ ಶಾಮಣ್ಣನಿಗೆ ಮೇಲಧಿಕಾರಿಗಳಿಂದ ರಜೆಯು ಸಿಗದು. ಕಡೆಗೆ ಮ್ಯಾನೇಜರರ ಮುಖಾಂತರ ಕೇಳಿಸಿ ಹೆಂಡತಿಯನ್ನು ಸ್ವಪ್ನಚಿತ್ರದಲ್ಲಿ ಕಾಣುವನು. ಇದುವೆ "ಶಾಮಣ್ಣನ ಸಂಭ್ರಮ" "ಅವರೇಕೆ ಇನ್ನೂ ಬರಲಿಲ್ಲ" ವೆಂದು ಕಳವಳಿಸುವ ಸೀತೆ ಹುಲಿಯ ಬಾಯಿಂದ ಬದುಕಿ ಬಂದ ಗಂಡ-ರಾಮುನನ್ನು ಕಂಡು ಇನ್ನೂ ಬರಲಿಲ್ಲ ವೆಂಬ ಹಂಬಲಕ್ಕೆ ಮೂಗುದಾರವನ್ನು ಪೋಣಿಸುವಳು. ಒಂದರಲ್ಲಿ ಹೆಂಡತಿಯ ಹಂಬಲವಿದ್ದರೆ ಇನ್ನೊಂದರಲ್ಲಿ ಗಂಡನ ಹಂಬಲವಿದೆ. ಎರಡರಲ್ಲೂ ಪ್ರೇಮ-ಕಾಮದ ಔತ್ಸುಕ್ಯದ ಮಿಲನವಿದೆ. "ರಾಣಿ ಕಲಿಸಿದ ನೀತಿ" ಯನ್ನರಿಯದ ಕೆಲ ಗಂಡಸರೂ ಉಂಟು. ಅದನ್ನು ಕಲಿಯಲು ರಾಣಿಯಂತಹ ಅನುಭವಸ್ಥರು ಮಧ್ಯಸ್ಥರಾಗಿ ನಿಲ್ಲಬೇಕು ಎಂಬುದನ್ನು ಕತೆಗಾರರು ನಿಚ್ಚಳವಾಗಿ, ಮಾರ್ಮಿಕವಾಗಿ ಭಾಷೆ-ಭಾವನೆಯಿಂದ ಎರಕ ಹೊಯಿದಿರುವರು. ಅಲ್ಲದೆ ಜಾನಕಿಯು ಪ್ರೇಮಪರೀಕ್ಷೆಯಲ್ಲಿ . ತೇರ್ಗಡೆಹೊಂದಿ ರಾಮಸ್ವಾಮಿಯನ್ನು ಮದುವೆಯಾದ "ನಿಷ್ಕರ್ಷೆ" ಯೂ ಗಂಡಸು ಕ್ರೂರ ಎಂದು ತಿಳಿದ ಕಮಲಳು ಸುಬ್ಬುವಿಗೆ ವಶಳಾಗಿ ಲಗ್ನವಾದ "ವಿವಾಹ ವಿಚ್ಛೇದ" ವೂ ತಿಮ್ಮ ಮಾದನ ಮೇಲೆ ರೇಗಿ, ಅವನಿಂದಲೇ ಉಪಕೃತನಾಗಿ ತನ್ನ ಮಗಳಾದ ಸೋಮಿಯನ್ನು ಮಾದನಿಗೆ ಕೊಟ್ಟು ಲಗ್ನಮಾಡಿದ "ತಿಮ್ಮನ ಕತ್ತೆ ಕಳೆಯಿತೂ" ಆಶ್ರಯ ತಪ್ಪಿದ ಆನಂದು ವೇಶ್ಯೆಯಾಗಿ ನಿಂತ ಸಮಯದಲ್ಲಿ ಆಶ್ರಯದಾತನನ್ನು ಕಂಡು ಹೇಸಿ ಆತ್ಮಹತ್ಯೆ ಮಾಡಿಕೊಂಡ "ಜೀವನ" ವೂ ಮುಖ್ಯವಾದವುಗಳ. ತಂದೆಯ ಮನೆಯನ್ನು ತಪ್ಪಿದ ಸ್ತ್ರೀಯು ಅನಾಥೆಯಾಗಿ ಪುರುಷಜೀವನದ ಎಂಜಲ ಎಲೆಯಾಗಿ ಹೊಂದಬಾರದ ದುರಂತ ಗತಿ ಹೊಂದಿ ವಿಷವೇ ಗತಿಯಾಗುವ "ಬ್ಯಾಕ್ಸಿ ಡ್ಯಾನ್ಸರ" ಕತೆಯು ಅದ್ಭುತವಾದುದು. ರೋಮಾಂಚಕಾರಿಯಾದುದು. ಉದ್ವೇಗಜನಕವಾದುದು. ಇವುಗಳಲ್ಲಿ ರಾಣಿ ಕಲಿಸಿದ ನೀತಿ, ತಿಮ್ಮನ ಕತ್ತಿ ಕಳೆಯಿತು, ಅವರೇಕೆ ಇನ್ನೂ ಬರಲಿಲ್ಲ, ಬ್ಯಾಕ್ಸಿ ಡ್ಯಾನ್ಸರ ಉತ್ತಮವಾದ ಕತೆಗಳು.

## ಧ್ಯೇಯವಾದಿ

ಜೀವಸಾಗರದಲ್ಲಿ ತಿಮಿಂಗಲದಂತಹ ದುಷ್ಟರು ಎಷ್ಟಿರುವರೆಂದು ಎಣಿಸಿ ಯಾರು ಹೇಳಬೇಕು! ತಮ್ಮ ಅಳವಿನಲ್ಲಿ ಬಂದವರನ್ನು ಹೇಗೆ ಚಮತ್ಕಾರವಾಗಿ ನುಂಗುವರು! ಇಂಥವರನ್ನು ಅಂಜನ ಹಚ್ಚಿ ದಿವ್ಯಚಿತ್ರವನ್ನು ತೋರಿಸುವ ಸಾಧುಗಳನ್ನು "ದೃಷ್ಟಿದೋಷ" ದಲ್ಲಿಯೂ ಶಿವಲಿಂಗ ಮಾಸ್ತರನ ಹೆಂಡತಿಯಾದ ಗಿರಿಬಾಲೆಯನ್ನು ತನ್ನ ಬುಟ್ಟಿಗೆ ಹಾಕಿಕೊಂಡ ರಾಚಿದೇವ "ಶರಣ"ರನ್ನೂ ಕೈಕೆಳಗಿನ ಗುಮಾಸ್ತರಿಂದ ಮಗಳ ಮದುವೆಗೆ ಉಡುಗೊರೆ ಬರಲೆಂದು ಆಸೆ ಬಟ್ಟ ಸಾಹೇಬರ "ಚಾರು ಮದುವೆ"ಯಲ್ಲಿಯೂ ಕಾಣಬಹುದು. ಗುಡಿಗೆ ಹೋದಾಗ ಸೀರೆಗೆ ಬೆಂಕಿ ತಗಲಲು ಗಂಡನು ದಿಕ್ಕು ತೋಚದಿದ್ದ ಸಮಯದಲ್ಲಿ ಗುರುವು ಬೆಂಕಿಯನ್ನು ನಂದಿಸಿ ಪ್ರಾಣದಾನ ಮಾಡಿದ "ಲಕ್ಷದೀಪೋತ್ಸವ"ವೂ ಸಮಾಜದ ಆಕ್ಷೇಪಣೆಯಿಂದ ಪಾರಾಗಲು ತಾನೂ ತನ್ನ ನಲ್ಲನೂ ಆರ್ಯ ಸಮಾಜಿಷ್ಟರಾದ "ಗಿರಿಜೆ ತೋರಿದದಾರಿ"ಯೂ ಮಲ್ಲಮ್ಮನ ಎಮ್ಮೆಯ ಕರವನ್ನು ಬಿಚ್ಚಿ ಹಾಲು ತಿನಿಸಬೇಕೆಂದ ತುಂಟ ಹುಡುಗರು ರಾತ್ರಿಯೆಲ್ಲ ಕಾದು ಕುಳಿತು ಬೆಳಗಿನ ಕೋಳಿಯ ಕೂಗನ್ನು ಕೇಳಿ ಮನೆಗೆ ತೆರಳಿದ. "ದೀಪಾವಳಿ"ಯೂ ಅನಾಥನುಡುಕನ ಮೇಲೆ ದಯೆಬಟ್ಟು ಮನೆಯಲ್ಲಿ ತಂದು ಪ್ರತಿ ತಂದೆಯಂತೆ ಕಂಡ "ರಾಜಕುಮಾರಿಯ ಔದಾರ್ಯ"ವೂ ಇಂಥ ಕತೆಗಳಲ್ಲಿ ಮುಖ್ಯವಾದವುಗಳು. ಇನ್ನು "ಮೇಳದ ಗಾಯಕಿ" ಯಲ್ಲಿ—ವೇಶ್ಯೆ ಚಂದು ನೀಲಕಂಠರಾಯರ ಹೆಂಡತಿಗೆ ಬಳೆ, ಮುತ್ತಿನ ಹಾರವನ್ನು ಒಂದಿಷ್ಟು ಕಣ್ಣೀರಿಗೆ ಕೊಟ್ಟುದು ಕತೆಯ ಬಿಗಿವನ್ನು ಸಡಲಿಸುವದು. "ಬಾಡಿ ಬಿದ್ದ ಹೂ"ವಿನಲ್ಲಿ ಬಡಗುಮಾಸ್ತನಾದ ತಂದೆಯು ಸರೋಜಳ ಲಗ್ನದ ಸಲುವಾಗಿ ಸೊರಗಿ ಸಣ್ಣಾಗಿ ಮಣ್ಣಾಗುವನು. ಆಗ ಸರೋಜಳು ಅನಾಥೆ. ಇದರಲ್ಲಿ ಬಾಡಿಬಿದ್ದ ಹೂ ಯಾವದು? ಉಳಿದ ಅವಳ ದುರ್ಭಾಗ್ಯ, ಕೊರವರ ನಾಗಿ, ಜೋಗಪ್ಪನ ಬಂಡೆ, ಬಾಳು ನೀಳ್ಗತೆಯ ಜಾತಿಯವೆನಿಸಿ ಪಾತ್ರ-ಕ್ಷೇತ್ರ-ಸ್ತೋತ್ರದ ಸೀಮೆಯನ್ನು ದಾಟಿದಂತೆ ಕಂಡು ಬರುವವು. ಇದರಿಂದ ಕತೆಯು ಒಂದಿಷ್ಟು ಗೊಂದಲಮಯವಾಗುವದು. ಆದರೂ ಬಾಳು, ಕೊರವರ ನಾಗಿಯಲ್ಲ ಕತೆಯ ಸೂಕ್ಷ್ಮ ಭಾವನೆ ಅಂತರಗಂಗೆಯಂತೆ ಜೋಡಿಸಿಕೊಂಡು ಬಂದಿದೆ.

ಈ ಕತೆಗಳಲ್ಲಿ ಚಾರು ಮದುವೆ, ಶರಣರು, ಬಾಳು ಉತ್ತಮವಾದವುಗಳು. "ಆಶೀರ್ವಾದ"ವು ಉತ್ಕೃಷ್ಟವಾದ ರೂಪಕವು. ಶ್ರೀ ಬೇಂದ್ರೆಯವರ ತಾಯಿ-ಮಗು ಸಂವಾದ ಕವಿತೆಯು ಗದ್ಯ ರೂಪವನ್ನು ಸ್ಮರಣೆಗೆ ತಂದುಕೊಡುವದು.

## ವೈಶಾಖಪಟ್ಟಿ

ವೈಶಾಖಪಟ್ಟಿಕ್ಕೆ ನಾಲ್ಕು ಕತೆಗಳು ನಿಲ್ಲುವವು. ೧ ದೇವಭಕ್ತಳಾದ ರಾಜಕುಮಾರಿ ೨ ತೊಲಗಿ ೩ ಗಿಲೋರಿ ೪ ರಾಧೆಯ ಕ್ಷಮೆ.

ದೇವಭಕ್ತಳಾದ ರಾಜಕುಮಾರಿ:— ಕುಮಾರಿಯು ಮಹಾತ್ಯಾಗಿ. ಆಕೆಗೆ ಅನುರೂಪನಾಗಿ ಒಬ್ಬ ತ್ಯಾಗಿಯು ಗಂಡನಾಗಿ ದೊರೆಯುವನು ಮದುವೆಯ ತರುವಾಯ ಅಡವಿಗೆ ಹೋಗುವರು. ಗಂಡನು ಹೆಂಡತಿಯು ರಾತ್ರಿಯ ಊಟಕ್ಕೆಂದು ಒಂದು ರೊಟ್ಟಿಯ ಚೂರನ್ನು ಮುಚ್ಚಿಡುವನು. ಇದು ಕುಮಾರಿಗೆ ತಿಳಿಯುವದು. ಸರ್ವರಕ್ಷಕ ದೇವರ ಮೇಲೆ ಅಪನಂಬಿಕೆಯನ್ನಿಟ್ಟು ನಾವು ಸ್ವತಃ ನಾಳಿನ ಚಿಂತೆಯನ್ನು ಮಾಡುತ್ತ ಬಾಳುವದು ಎಂಥ ತ್ಯಾಗ! ಎಂದು ಕುಮಾರಿ ಸವಾಲು. ತ್ಯಾಗಿಯು ಕಣ್ಣು ತೆರೆಯುವನು. ಅರಮನೆಯಲ್ಲಿ ಬೆಳೆದ ರಾಜಕುಮಾರಿಗೆ ನಾಳಿನ ಸಂಕಟವಾಗದಿರಲೆಂದು ತ್ಯಾಗಿಯು ಮಾಡಿದ ಹಂಚಿಕೆಯು ಲೌಕಿಕ ದೃಷ್ಟಿಯಿಂದ ಸರಿಯಾದುದು. ಆದರೆ ಪಾರಮಾರ್ಥಿಕ ದೃಷ್ಟಿಯಿಂದ ತಪ್ಪು. ಕತೆಯಲ್ಲಿ ಹೆಣೆದ ವಸ್ತು ಶುದ್ಧ ಸತ್ಯವಾದುದು. ಸುಂದರವಾದುದು. ನಂಬಿಕೆ-ಅಪನಂಬಿಕೆಗಳ ಘರ್ಷಣದಿಂದ ಹೊರಟ ತತ್ವ ಪರಿಶುದ್ಧವಾದುದು.

ತೊಲಗಿ:— ಬಸವನಮಗ ಶಂಕರನು ಗುಂಡಿನೇಟಿನಿಂದ ಸಾಯುವನು. ಗೌಡರಿಗೆ ಸೆರೆಮನೆಯವಾಸ. ತಿರುಗಿ ಬರುವರು. ಬಸವನನ್ನು ಸಮಾಧಾನಪಡಿಸಲು ಅವನ ಮನೆಗೆ ಹೋಗುವರು. ಕೈದೀವಟಿಗೆಯಂತಹ ಮಗನನ್ನು ಕಳೆದುಕೊಂಡ ಬಸವನು ಏನೆನ್ನುವನೋ, ತಾಯಿ ಏನೆಂದು ಶಪಿಸುವಳೋ ಎಂದು ಗೌಡರ ಹೆದರಿಕೆ. ಕಡೆಗೆ ಡೋಲಾಯಮಾನಸದಿಂದ ಮನೆಯನ್ನು ಮುಚ್ಚುವರು. ಬಸವ! ಎಂದು ಕೂಗುವರು. ಬಸವ ಬಂದು ಭಕ್ತಿಯಿಂದ ನಮಸ್ಕರಿಸುವನು. ಬಾಯಿಂದ ದುಃಖದಿಂದ ಶಂಕರ ಎನ್ನುವರು. ಬಸವ ಆದೇ ಹುಟ್ಟಿದ ಎಳೆಗೂಸನ್ನು ತಂದು "ಇದು ನೋಡಿ ನನ್ನ ಬಾಲ ಶಂಕರ" ಎಂದು ಕೈಗೆ ಕೊಡುವನು. ಗೌಡನ ಕಣ್ಣಲ್ಲಿ ನೀರೂರುವವು. ಧನ್ಯತೆಯನ್ನರ್ಪಿಸುವರು. ಬಸವ ಎಂಥ ಉದಾತ್ತವಾದ ಪಾತ್ರವು! ಮಗನು ಹೋದನು. ದೈವ ಇನ್ನೊಂದು ಮಗುವನ್ನು ಕೊಟ್ಟಿತು. ಸತ್ತ ಶಂಕರನೇ ಅವನೆಂದು ನೋಡುವ ಕಣ್ಣು ಎಷ್ಟು ದಿವ್ಯವಾದುದು! ಮನಸು ಎಂಥ ವಿಶಾಲವಾದುದು! ಇಂಥ ತಂದೆ-ತಾಯಂದಿರಿದ್ದರೆಂತಲೇ ಕಳೆದ ಅಂದೋಲನದಲ್ಲಿ ಬಲಾಢ್ಯ ಸರಕಾರ ನಡುಗಿಬಿಟ್ಟಿತು.

ಗಿಲೋರಿ:- ಬಾದಶಹನ ಮಗ ಒಬ್ಬ ಬ್ರಾಹ್ಮಣ ಸತಿಗೆ ಗಿಲೋರಿಯನ್ನು ಕಳಿಸುವನು. ಅವಳು ಸಿಟ್ಟಾಗಿ ಪೂಪನಿಗೆ ಹೇಳುವಳು. ಪೂಪನು ಬಾದಶಹನಿಗೆ ಬಿನ್ನವಿಸುವನು. ಬಾದಶಹನು ಕಾಜಿಯನ್ನು ಕರೆಯುವನು. ಕಾಜಿಯು- ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು ಎನ್ನುವನು. ಸರಿ, ಬ್ರಾಹ್ಮಣನ ಮಗ ಬಾದಶಹನ ಸೊಸೆಗೆ ಗಿಲೋರಿಯನ್ನು ಕಳಿಸಬೇಕೆಂದು ತೀರ್ಪು. ಕತೆಯು ಇಲ್ಲಿಯ ವರೆಗೆ ಹೆಜ್ಜೆ ಹೆಜ್ಜೆಯಾಗಿ ಮೇಲೇರುತ್ತ ಶಿಖರಕ್ಕೆ ಬಂದು ಮುಟ್ಟುವದು. ಎಲ್ಲ ಸರಳ. ಸುಂದರ. ವ್ಯವಹಾರಪೂರ್ಣವಾದುದು. ಸತ್ಯವಾದುದು. ನ್ಯಾಯಮಂದಿರದಲ್ಲಿ ಸಾವಿರಾರು ಪ್ರಜೆಗಳ ಎದುರಿನಲ್ಲಿ ಬಾದಶಹನ ಸೊಸೆಗೆ ಒಬ್ಬ ಬ್ರಾಹ್ಮಣ ಕುಮಾರನು ಗಿಲೋರಿಯನ್ನು ಕೊಡುವದು ಎಂಥ ಆಶ್ಚರ್ಯ. ಕುತೂಹಲವು ಉಸಿರು ಗಟ್ಟಿಗೊಂಡು ನಿಲ್ಲುವದು. ಆದರೆ ಕೊನೆ-ಬ್ರಾಹ್ಮಣನು "ಮಗನು ಮನೆಯಲ್ಲಿಲ್ಲ"ವೆಂದು ಹೇಳುವನು. ಕೊನೆಯಿಂದ ನ್ಯಾಯವೂ ದೊರೆಯಿತು. ಬಾದಶಹನ ಮಗನಿಗೆ ಯೋಗ್ಯ ಶಿಕ್ಷೆಯೂ ಆಯಿತು. ಬ್ರಾಹ್ಮಣನೂ ತೃಪ್ತ. ಸಭೆಯೂ ಮೆಚ್ಚಿತು. ಸಮಾಜವೂ ಕೊಂಡಾಡಿತು. ದುರಂತದಲ್ಲಿ ಕೊನೆಗೊಳ್ಳುವ ಕತೆ ಎಷ್ಟು ಹೃದಯಂಗಮವಾಗಿ ಕೊನೆಗೊಂಡಿದೆ. ಎಲ್ಲ ಪಾತ್ರಗಳು ಪರಿಶುದ್ಧ. ಕತೆಯೂ ತಿಳಿಯಾದ ಹೊಳೆ. ಪರಿಣಾಮಕಾರಿ.

ರಾಧೆಯ ಕ್ಷಮೆ:— ಗಂಡಹೆಂಡರು ಸುಖದಿಂದ ಬಾಳುತ್ತುಂಟು. ಒಂದಿನ ಹೆಂಡತಿಯು ಬಲಗಾಲು ತಿನಿಸುಬಿಡುವದು. ನಡುವೆ ಗಂಡನು ಒಂಟಿ ಸೀನುವನು. ಆರು ತಾಸಿನ ವರೆಗೆ ಶ್ರಮಬಟ್ಟು ಬರೆದ ಚಿತ್ರವು ಮಗನ

—೧೬ನೇ ಪುಟಕ್ಕೆ

ನಂ. ಡಬ್ಲ್ಯೂ ಎ ಆರ್. ಜೆ ೮೨
ಧಾರವಾಡ, ೨೭ ನೇ ಜೂನ ೧೯೪೬

## ಸೇರ್ಪಡೆ ಮತ್ತು ತಿದ್ದುಪಡಿ:—

"ಸೀದಾ ಕ್ಷೇತ್ರಗಳಲ್ಲಿ ಮತ್ತು ಸೀದಾ ಜಾರಿಯಲ್ಲಿರದ ಕ್ಷೇತ್ರಗಳಲ್ಲಿ ಬೆಲ್ಲದ ಮೂಲ ಹಂಚಿಕೆಯ ಪ್ರಮಾಣ" ದ ಸಂಬಂಧದ ಈ ಕಚೇರಿಯ ೧೮ ಜೂನ ೧೯೪೬ ನೇ ಆಜ್ಞಾ ನಂ. ಡಬ್ಲ್ಯೂ ಎ ಆರ್. ಜೆ. ೮೨ ರಲ್ಲಿ ಆ ಆಜ್ಞೆಯ ಮೊದಲನೇ ಪ್ಯಾರಾದಲ್ಲಿ "ರಾಣೇಬಿನ್ನೂರ" ಎಂಬ ಶಬ್ದದ ತರುವಾಯ ಬರುವ "ಮತ್ತು ಈ ಜಿಲ್ಲೆಯೊಳಗಿನ ಸೀದಾ ಜಾರಿಯಲ್ಲಿರದ ಕ್ಷೇತ್ರಗಳಲ್ಲಿ" ಎಂಬ ಶಬ್ದಗಳನ್ನು ತೆಗೆಯತಕ್ಕದ್ದು. ಮತ್ತು

"ಮಕ್ಕಳು" ಎಂಬ ಶಬ್ದದಿಂದ ಪ್ರಾರಂಭವಾಗುವ ಮತ್ತು "ಒಂದು ಯುನಿಟು" ಎಂಬ ಶಬ್ದಗಳಿಂದ ಮುಗಿಯುವ ಪ್ಯಾರಾದ ನಂತರ,

"ಈ ಜಿಲ್ಲೆಯೊಳಗೆ ಸೀದಾ ಜಾರಿಯಲ್ಲಿರದ ಕ್ಷೇತ್ರಗಳಲ್ಲಿ ಪ್ರತಿಪಕ್ಷಕ್ಕೆ ಪ್ರತಿಯೊಬ್ಬ ವ್ಯಕ್ತಿಗೆ ಬೆಲ್ಲದ ಹಂಚಿಕೆಯ ಮೂಲ ಪ್ರಮಾಣ ೮ ಔಂಸುಗಳು ಆಗುವದು" ಎಂದು ಸೇರಿಸತಕ್ಕದ್ದು.

ಈ ಆಜ್ಞೆಯನ್ನು ಎಲ್ಲ ಅಧಿಕೃತ ಸೀದಾ ಅಂಗಡಿಗಳಿಗೆ ಮತ್ತು ಗ್ರಾಮ-ಹಂಚಿಕೆ ಕೇಂದ್ರಗಳಿಗೆ ಕಳಿಸತಕ್ಕದ್ದು ಮತ್ತು ಅದಕ್ಕೆ ಯೋಗ್ಯ ಪ್ರಸಿದ್ಧಿ ಕೊಡತಕ್ಕದ್ದು ಹಾಗೂ ಅದರ ಅಮಲಬಜಾವಣೆಯನ್ನು ನೋಡತಕ್ಕದ್ದು.

ವ್ಹಿ. ಟಿ. ದೆಹೆಜಿಯಾ,
ಜಿಲ್ಲಾ ಮ್ಯಾಜಿಸ್ಟ್ರೇಟ, ಧಾರವಾಡ.

Reg. No. B. 3148

LICENCE No 3
Licenced to Post without Prepayment

KARMAVEER 8-7-46

ಭವಿಷ್ಯ


ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ ಶಹರ

# ಜುಲೈ ತಾ. ೮ ರಿಂದ ೧೪ ರ ವರೆಗೆ

## ಮೇಷ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಪ್ರಾಪಂಚಿಕ ಸ್ಥಿತಿ ವ್ಯವಸ್ಥಿತವೆ. ಆದರೆ ಕೆಲ ಆಗಂತುಕ ತೊಂದರೆಯ ಅಂಜಿಕೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಸಾಧಾರಣವೆ. ಆದರೆ ಪ್ರತಿಷ್ಠೆ ಉತ್ತಮ. ಹಳೆಯ ಪರಿಚಯದ ಮಿತ್ರರು ಇಲ್ಲವೆ ಅಪ್ತರ ಭೆಟ್ಟಿ ಪರಿಚಯವಾಗುವ ಯೋಗ. ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಶತ್ರುಗಳಿಂದ ಅಡ್ಡಿ ಮತ್ತು ತೊಂದರೆ ಬಹಳ. ಆದರೆ ಕೊನೆಯಲ್ಲಿ ಬಹಳ ಯಶಸ್ಸು. ಮಕ್ಕಳಲ್ಲಿ ಸಮಾಧಾನದ ಕೆಲಸಗಳು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಅದಕ್ಕಿಂತ ಪತ್ರವ್ಯವಹಾರವೂ ಅನುಕೂಲ. ಅಶ್ವಿನಿಯ ೪ ನೆ ಮತ್ತು ಭರಣಿಯ ಮೊದಲನೇ ಮೂರು ಚರಣಗಳಿಗೆ ತೊಂದರೆ ಕಡಿಮೆ. ತಾ. ೮, ೯, ೧೨, ೧೩ ಅನುಕೂಲ.

## ವೃಷಭ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಅದರಂತೆಯೇ ಪ್ರಾಪಂಚಿಕ ಸಮಾಧಾನದ ಹೆಚ್ಚಳ. ಮಕ್ಕಳಲ್ಲಿ ಉನ್ನತಿ. ಪ್ರತಿಯೊಂದು ಕೆಲಸದಲ್ಲಿ ನಿಮ್ಮದೇ ಮನಸ್ಸು ನಿರರ್ಥಕವಾಗಿ ಅಂಜುತ್ತಿರುವದು. ಆದರೆ ಅದನ್ನು ಮಾಡಹೋದರೆ ಕೊನೆಯಲ್ಲಿ ಒಳ್ಳೆ ಯಶಸ್ಸು ಸಿಗುವದು. ಉದ್ಯೋಗದಲ್ಲಿ ಉತ್ತಮ ಪ್ರಗತಿ. ಮನಸ್ಸಿನಂತೆ ಪ್ರತಿಷ್ಠೆ ಮತ್ತು ಅಂದಾಜಿಗಿಂತ ಹೆಚ್ಚು ಲಾಭ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಒಡಂಬಡಿಕೆಯ ಪೂರ್ಣ ಇಚ್ಛೆ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ರೋಹಿಣಿಯ ಕೊನೆಯ ೩ ಮತ್ತು ಮೃಗಾದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೧೦, ೧೧ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮವೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಬಹಳ ನಡೆಯುವದು. ಮಕ್ಕಳಲ್ಲಿ ಮತ್ತು ಬಂಧುವರ್ಗದವರಲ್ಲಿ ಉನ್ನತಿಯ ಕೆಲಸಂಗತಿಗಳು ಸಂಭವಿಸುವವು. ಆದರೆ ನಿಮ್ಮ ಮೇಲೆ ಕೆಲ ಕಾರಣಗಳಿಂದ ಅವರು ಸಿಟ್ಟಾಗುವರು. ಇಲ್ಲವೆ ಹಲ್ಲು ಕಿರಿಯುವರು. ಉದ್ಯೋಗದಲ್ಲಿ ಪ್ರಗತಿಯಲ್ಲಿ ಬಹಳ ಹಿಮ್ಮೆಡುವದು. ಆದರೆ ಲಾಭ ಮತ್ತು ಪ್ರತಿಷ್ಠೆ ಉತ್ತಮ. ವಾದದಲ್ಲಿ ಒಳ್ಳೇ ಯಶಸ್ಸು. ಸ್ಥಾವರ ಜಂಗಮ ಸಂಗ್ರಹದಲ್ಲಿ ಹೊಸ ಹೆಚ್ಚಳ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಆರಿದ್ರಾದ ಕೊನೆಯ ೩ ಮತ್ತು ಪುನರ್ವಸುವಿನ ಮೊದಲನೆ ಚರಣಕ್ಕೆ ತೊಂದರೆಯಿಂದಲೇ ಯಶಸ್ಸು. ತಾ. ೮, ೯, ೧೩, ೧೪ ಅನುಕೂಲ.

## ಕರ್ಕ

ಪ್ರಕೃತಿ ಮತ್ತು ಸ್ತ್ರೀಸುಖ ಅನುಕೂಲ. ಪ್ರಾಪಂಚಿಕ ವಿಷಯಗಳಲ್ಲಿ ಕೆಲ ಸಲ ನಗುವ ಆದರೆ ಕೆಲ ಸಲ ಭೀಷಣ ಸ್ತಬ್ಧತೆಯ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೆ. ಆದರೆ ವೆಚ್ಚದ ಹೆಜ್ಜೆ ಜೋರಿನಿಂದ ಹಿಂದಕ್ಕೆ ಬೀಳಹತ್ತುವದು. ಸರಕಾರಿ ಕೆಲಸದಲ್ಲಿ ಲಂಚದ ಮಾರ್ಗ ಹಿಡಿಯಬೇಕಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೇ ಜೋರು ಹೆಚ್ಚು. ಮಿತ್ರಸುಖ ಅನುಕೂಲ. ಸ್ಥಾವರದಲ್ಲಿ ಹೆಚ್ಚಳ. ಆದರೆ ಜಂಗಮ ಸಂಗ್ರಹದಲ್ಲಿ ಬೂಡು. ಪ್ರವಾಸಾದಿ ಕೆಲಸ ಸಾಧಾರಣ ಸುಖಕರ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ಮೊದಲನೆ ಚರಣಗಳಿಗೆ ತೊಂದರೆ ಹೆಚ್ಚು. ತಾ. ೯, ೧೦, ೧೧, ಅನುಕೂಲ.

## ಸಿಂಹ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಅನುಕೂಲ. ಆದರೆ ಸಣ್ಣ ಸಣ್ಣ ಸಂಗತಿಗಳಲ್ಲಿಯೂ ಹೆಂಡತಿಯಿಂದ ವಿರೋಧದ ವರ್ತನೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅನುಕೂಲ. ಆದರೆ ಲಾಭದ ಪ್ರಸಂಗ ಕೊಂಚ ಮುತ್ತಲೇ ಹಡೆಯುವ ಅಂಜಿಕೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಂದೆ ಹೆಜ್ಜೆ ಇಡಬೇಕಾದ ಸಂಧಿ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಪುಭಾದ ಕೊನೆಯ ೩ ಮತ್ತು ಪೂರ್ವಾದ ಮೊದಲನೆ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೨, ೧೩, ೧೪ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀಸುಖ ಅನುಕೂಲ. ಆದರೆ ಉಳಿದ ಅನೇಕ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆಯಾಗುತ್ತ ನಡೆಯುವದು. ಪರಸ್ತ್ರೀ ಗೂಡ ಕುಬುದ್ಧಿಯಿಂದ ವ್ಯವಹರಿಸಿದ ಬಗ್ಗೆ ಅನೇಕರ ತಪ್ಪು ತಿಳುವಳಿಕೆ. ಉದ್ಯೋಗದಲ್ಲಿ ಪ್ರಗತಿ ಕಡಿಮೆ. ಆದರೆ ಪ್ರತಿಷ್ಠೆ ಮತ್ತು ಲಾಭ ತುಂಬ. ಈರ್ಷೆ ಇಲ್ಲವೆ 'ಜೈನಿ'ಗಾದಿ ವಿಪರೀತ ವೆಚ್ಚ. ಮಿತ್ರಸುಖ ಅನುಕೂಲ. ಆದರೆ ಶತ್ರುಗಳೂ ಅಷ್ಟೇ ತೊಂದರೆ ಕೊಡುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಮಾನಸ್ಥಿತಿ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ ನೇ ಚರಣಗಳಿಗೆ ತೊಂದರೆ ಕಡಿಮೆ. ತಾ. ೮, ೯, ೧೦, ೧೧ ಅನುಕೂಲ.

## ತುಲಾ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಆದರೆ ಉಳಿದ ಪ್ರಾಪಂಚಿಕ ವಿಷಯಗಳಲ್ಲಿ ಮನಸ್ಸಿಗೆ ಹತ್ತುವಂಥ ಅನೇಕ ಸಂಗತಿಗಳು ಅಪ್ರಿಯ ಅತಿಥಿಗಳು ಬರಹೋಗುವದು ಒಂದೇಸವನೆ ನಡೆಯುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೆ. ಆದರೆ ಪರೋಪಕಾರ ಇಲ್ಲವೆ ದೊಡ್ಡಸ್ತನದ ಹೆಸರಿನಲ್ಲಿ ಬಹಳ ವೆಚ್ಚ ಮಾಡಬೇಕಾದ ಪ್ರಸಂಗ. ಶತ್ರುಗಳಿಗೆ ಕೂಡ ತಿಳಿದೆ ಬೊಗ್ಗಬೇಕಾದ ಸರತಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನಸ್ಥಿತಿ ಮಿತ್ರಸುಖ ಅನುಕೂಲ. ಸ್ಥಾವರದಲ್ಲಿ ಕೆಲ ಅನುಕೂಲ ಸಂಗತಿಗಳು. ಪ್ರವಾಸಾದಿ ಕೆಲಸ ಅನುಕೂಲ ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ ನೇ ಚರಣಕ್ಕೆ ತೊಂದರೆ ಬಹಳ. ತಾ. ೮, ೯, ೧೩, ೧೪ ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಪ್ರಾಪಂಚಿಕ ಸುಖ ಅನುಕೂಲ. ಆದರೆ ಮಕ್ಕಳಲ್ಲಿ ಬಹಳ ಉನ್ನತಿ. ಆದರೆ ಆ ಬಗ್ಗೆ ಪತಿ-ಪತ್ನಿಯರಲ್ಲಿ ಬಹಳ ತಿಕ್ಕಾಟ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ವೆಚ್ಚವೂ ಅಂದಾಜ ಮೀರಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಇಲ್ಲವೆ ಮಾನ್ಯ ಒಡಂಬಡಿಕೆ. ಮಿತ್ರಸುಖ ಉತ್ತಮ. ಸಾಮಾಜಿಕ ಕಾರ್ಯದಲ್ಲಿ ಜಾಹೀರ ಗೌರವ, ಉಪಕಾರಕರ್ತರಿಗೆ ಬಹಳ ಕ್ಲೇಶ, ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಅನುಕೂಲ ಅನುರಾಧಾದ ಕೊನೆಯ ೩ ಮತ್ತು ಜ್ಯೇಷ್ಠಾದ ೧ ನೇ ಚರಣಕ್ಕೆ ತೊಂದರೆಯಿಂದಲೇ ಯಶಸ್ಸು. ತಾ, ೧೦, ೧೩, ೧೪ ಅನುಕೂಲ.

## ಧನು

ಪ್ರಕೃತಿ ಸಾಧಾರಣ ಕಿರಕಿರಿಯದು. ಹೆಂಡತಿಯದು ಹಾಗೆಯೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣ ಅನುಕೂಲ ಮಕ್ಕಳಿಂದ ಸಮಾಧಾನ ಹೆಚ್ಚುಸುವಂತಹ ವರ್ತನೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ಮತ್ತು ಆಯಾ ಕೆಲಸಗಳಲ್ಲಿ ಅಲ್ಪಾಯಾಸದಿಂದ ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲ ಸ್ಥಿತಿ ಸ್ಥಾವರದಲ್ಲಿ ಹೆಚ್ಚಳ. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಮೂಲಾದ ೪ ನೇ ಪೂರ್ವಾಷಾಢಾದ ೧ ನೆ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ ೮—೯—೧೩—೧೪ ಅನುಕೂಲ.

## ಮಕರ

ಪ್ರಕೃತಿ ಅನುಕೂಲ. ಪ್ರಾಪಂಚಿಕ ಸುಖ ದಗಿದಗಿಯದು. ಹೆಂಡತಿಗೂಡ ಮೇಲಿಂದ ಮೇಲೆ ಮತಭೇದ ಮಕ್ಕಳು ಭಿಡೆ ಹಿಡಿಯದಂತಹ ಭಾಷೆಯಾಡುವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆ ಕಡಮೆ. ಪ್ರತಿಯೊಂದು ಕೆಲಸದಲ್ಲಿ ವಿತಂಡವಾದದ ಪ್ರಸಂಗ, ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಾಮಾನ್ಯ ಅನುಕೂಲತೆ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠೆಯ ೧ ನೇ ಚರಣಗಳಿಗೆ ತೊಂದರೆ ಕಡಮೆ. ತಾ. ೮—೯—೧೦—೧೧ ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣವೆ. ಆದರೆ ಸ್ತ್ರೀ ಸುಖ ಉತ್ತಮ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸಮಾಧಾನ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅನುಕೂಲದು. ಮಿತ್ರ ಸುಖ ಉತ್ತಮ. ಮಕ್ಕಳಲ್ಲಿ ಕೆಲವೊಬ್ಬರ ಅಸಭ್ಯ ವರ್ತನೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ೧ ನೆ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ ೮—೯ ೧೩—೧೪ ಅನುಕೂಲ.

## ಮೀನ

ಪ್ರಕೃತಿ ಉತ್ತಮ. ಆದರೆ ಪ್ರಾಪಂಚಿಕ ವಿಷಯಗಳಲ್ಲಿ ಬಹಳ ಅಸಮಾಧಾನ ಹೆಂಡತಿಗೂಡ ಮೇಲಿಂದ ಮೇಲೆ ವಿರೋಧ. ಬಂಧು ವರ್ಗದವರಿಂದ ಮೇಲಿಂದ ಮೇಲೆ ಆರೋಪ. ಉದ್ಯೋಗದಲ್ಲಿ ಪ್ರಗತಿ ಕಡಮೆಯೆ. ಆದರೆ ಪ್ರತಿಷ್ಠೆ ಲಾಭ ಉತ್ತಮ. ಮಿತ್ರ ಸುಖ ಅನುಕೂಲ. ನೆರೆಯವರಿಂದ ತಮ್ಮತನದ ವರ್ತನ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೦—೧೨—೧೩—೧೪ ಅನುಕೂಲ.

# ವೈಶಾಖ ಮಾಸದ ಕತೆಗಳು

(ಪುಟ ೧೫ ರಿಂದ)

ಕಾಲೊದಕದಿಂದ ಹಾಳಾಗುವದು. ಗಂಡ ಸಿಟ್ಟಿಗೆ ಬಂದು ಅಪಶಬ್ದಗಳನ್ನಾಡುವನು. ಹೆಂಡತಿಯು ಕೆರಶಿ ಬಿಡುವಳು. ಗಂಡನ ಬಾಯಿಂದ ಇಂಥ ಬೈಗಳು ಬರಬಾರದೆಂದು ಛಲ ಹಿಡಿದು ಕ್ಷಮಾಪತ್ರ ಬರೆಯಿಸಿಕೊಳ್ಳುವಳು ಕಡೆಗೆ ಇಬ್ಬರೂ ರಾಜಿಯಾಗುವರು. ಕತೆ ಇಷ್ಟು. ಉದ್ದಕ್ಕೂ ಭಾಷೆ ಸುಂದರವಾದ ಉಪಮಾನೋಪಮೇಯಗಳಿಂದ ಮಿಂಚು ಹೊಸಿದಂತೆ ಸಾಗುವದು. ನಡು ನಡುವಿನ ಸಂವಾದ ಎಷ್ಟು ನಯ. ಶಬ್ದದಿಂದ ಶಬ್ದಕ್ಕೆ ಭಾವನೆಯು ಹಕ್ಕಿಯಂತೆ ಹಾರಿಕೊಂಡು ಬರುವದು. ಉತ್ಸುಕತೆಯಿಂದ ತುದಿಯವರೆಗೂ ಉಸಿರುಗಟ್ಟಿಕೊಂಡು ಓದುವದು. ಕತೆಯ ಸಂವಿಧಾನ ಮಲ್ಲಿಗೆಯ ಹೂವಿನಂತೆ ಮನೋಹರ. ಆದರೆ ಆ ಹೂವನ್ನು ತೂಗಿ ನೋಡಿದರೆ ಹೇಗೆ?

ವೈಶಾಖ ಪಟ್ಟಕ್ಕೆ ನಿಂತ ನಾಲ್ಕು ಕತೆಗಳೂ ಅತ್ಯುತ್ತಮವಾದವುಗಳು. ಅವುಗಳಲ್ಲಿ ಒಂದಕ್ಕೆ ಮೇಲಪಟ್ಟಕ್ಕೆ ಕಟ್ಟಬೇಕೆಂದರೆ ಗಿಲೋರಿಗೆ ಸರಿ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು

# ಸಹಕಾರ ಅಂದೋಲನ

( ೨ನೇ ಪುಟದಿಂದ )

ನದ ಮಟ್ಟವು ಬೇಗನೆ ಮತ್ತು ಭದ್ರವಾಗಿ ಮೇಲೇರಬಹುದು. ಎಲ್ಲಿಯಾದರೊಂದು ಘನ ಉದ್ಯಮವನ್ನು ತೆಗೆಯಲೆಣಿಸಿ ಎಲ್ಲಿಂದಲೋ ಅದಕ್ಕೆ ಒರಟು ಸರಕು, ಕೂಲಿಕಾರರು ಮತ್ತು ವಿಪುಲವಾದ ಬಂಡವಲು ಇವುಗಳು ಒದಗುವಂತೆ ಒದ್ದಾಡುವದಕ್ಕಿಂತ ಚಿಕ್ಕ ಚಿಕ್ಕ ಚೊಕ್ಕಟವಾದ ಕೆಲಸಗಳನ್ನು ಅಲ್ಲಿಯದೇ ಅದ ಸಾಮುಗ್ರಿಯಿಂದ ಅಲ್ಲಿಯವರೇ ಅದ ಕಲಾಕಾರರಿಂದ ನಡೆಸುವದು ಯುಕ್ತವಲ್ಲವೆ?

ಸಹಕಾರವು ಒಂದು ಜೀವನಮಾರ್ಗವೆಂದು ತಿಳಿದುಕೊಂಡರೆ ಅದರ ಶಕ್ತಿಗೆ ಮೇರೆ-ಮಿತಿಗಳೇ ಇಲ್ಲ. ಅನೇಕ ಮುಖವಾಗಿ ಆ ಅಂದೋಲನವನ್ನು ಮುಂದೆ ಸಾಗಿಸಬಹುದು. ಒಂದು ಸಾಲ ಪರಿಹಾರ ಸಂಸ್ಥೆ; ಒಂದು ಒತ್ತಿಯ ಕಡ ಕೊಡುವ ಸಂಘ; ಒಂದು ತಜ್ಞರ ಮಂಡಲ; ಒಂದು ಕೂಲಿಕಾರರ ಕೂಟ; ಒಂದು ನೀರಾವರಿಯ ಯೋಜನೆ; ಒಂದು ವಿದ್ಯುತ್ತಿನ ಪ್ರಯೋಗ; ಒಂದು ಕಟ್ಟಡದ ಕಾರ್ಯ; ಒಂದು ಮಾರ್ಗಗಳ ಸಮಿತಿ; ಹೀಗೆ ಪ್ರತಿಯೊಂದು ಬಗೆಯ ಸಂಸ್ಥೆಯನ್ನು ಸುರುವು ಮಾಡಬಹುದು. ಇಷ್ಟೆ ಏಕೆ ಇಂದು ಕ್ಷಾಮ ಕಾಲದಲ್ಲಿ ಅನ್ನ-ಪೇಯ ವಸ್ತ್ರಗಳನ್ನು ಹಂಚುವ ಕಾರ್ಯವನ್ನು ಮಾಡಲಿಕ್ಕೆ ಕೂಡ ಮೂಲೆ ಮೂಲೆಯಲ್ಲಿಯೂ ಹಳ್ಳಿಹಳ್ಳಿಗಳಲ್ಲಿಯೂ ಹರಡಿರುವ ಜನತೆಯ ಸಂಸ್ಥೆಗಳಾದ ಸಹಕಾರ ಸಂಘಗಳಂತಹ ಯೋಗ್ಯ ಮಾಧ್ಯಮಗಳು ಮತ್ತಾವೂ ಇಲ್ಲ. ಅಂತೆಯೆ ಅಲ್ಲವೆ ಈ ಯೋಜನೆಗೆ ಗಾಂಧೀಜಿಯವರು ತಮ್ಮ ಒಪ್ಪಿಗೆಯನ್ನು ಕೊಟ್ಟಿರುವದು!

ಅಂತು ಈ ಹೊಸ ನೋಟದಿಂದ ಸಹಕಾರ ಅಂದೋಲನದಲ್ಲಿ ಜನತೆಯು ಆಸ್ಥೆಯನ್ನು ವಹಿಸಿದರೆ ಸರ್ ಹೋರೇಸ್ ಪ್ಲಾಂಕೆಟ್ ಅವರು ಹೇಳಿದಂತೆ ಹಿಂದುಸ್ತಾನದ ಸಹಕಾರ ಅಂದೋಲನವು ಸರಕಾರದ ಕೈಗೊಂಬೆಯೆನ್ನಿಸದೆ, ನಿಜವಾಗಿಯೂ ಜನತೆಯ ಚಳವಳಿಯಾಗುವದರಲ್ಲಿ ಸಂದೇಹವಿಲ್ಲ.